# ರಾಧೇಯ

ಕೃಷ್ಣಮೂರ್ತಿ ಪುರಾಣಿಕ

1952

ಸಾಹಿತ್ಯ ಸೇವಾ ಮಂದಿರ
ಗೋಕಾಕ

೧-೪-೦

ವಿನಯ ಸಂಪನ್ನರೂ, ಮಹಾದಾನಿಗಳೂ

ವಿದ್ಯಾಪಕ್ಷಪಾತಿಗಳೂ, ಸಾಹಿತ್ಯ ಪ್ರೇಮಿಗಳೂ

ಆಗಿರುವ

**ಶ್ರೀಮಂತರಾದ ವೆಂಕಪ್ಪಾ ಅಣ್ಣಾ ಸಕ್ರಿ**

ಇವರಲ್ಲಿ ನೆಲೆಯಾಗಿ ನಿಂತ

ವಿಶಾಲ ದೃಷ್ಟಿಯನ್ನೂ, ಉದಾರ ಹೃದಯವನ್ನೂ

ಮೆಚ್ಚಿ

ಈ ಕಾವ್ಯ ನಾಟಕವನ್ನು ಕಾಣಿಕೆಯಾಗಿ

ಅರ್ಪಿಸಿದ್ದೇನೆ.



— **ಕೃಷ್ಣಮೂರ್ತಿ**

# ಅರಿಕೆ

' ನೆನೆಯದಿರಣ್ಣ ಭಾರತದೊಳಿಂ ಪೆರರಾನುಮನೊಂದೆ ಚಿತ್ತದಿಂ, ನೆನೆವೊಡೆ ಕರ್ಣನಂ ನೆನೆಯ . . . ' ಎಂಬ ಮಹಾಕವಿಯ ಮಾತುಗಳು ನನ್ನಲ್ಲಿ ಬಹಳ ದಿನಗಳಿಂದಲೂ ತರಂಗಗಳನ್ನೆಬ್ಬಿಸುತ್ತಿದ್ದವು. ಕರ್ಣ ಜೀವನವನ್ನು ಕುರಿತು ನಾನೂ ಒಂದು ಅಲ್ಪ ಕಾಣಿಕೆಯನ್ನು ಸಲ್ಲಿಸಬೇಕೆಂಬ ಭಾವವು ಬಲಿಯತೊಡಗಿತು. ಈ ಮಹಾಜೀವನಕ್ಕೆ ಸಂಬಂಧಿಸಿದ ಬೇರೆ ಬೇರೆ ಕಾವ್ಯ–ಪುರಾಣಗಳನ್ನು ಓದಿ ಮುಗಿಸತೊಡಗಿದಂತೆ ಬರೆಯುವ ರೂಪ ರೇಷೆ ಸಿದ್ಧವಾಗತೊಡಗಿತು. ಅದರ ಫಲವೇ ಈ ' ರಾಧೇಯ '.

' ರಾಧೇಯ ' ನನ್ನು ಹಸ್ತಪ್ರತಿಯಲ್ಲಿ ಓದಿದ, ಅದರ ವಾಚನವನ್ನು ನನ್ನಿಂದ ಕೇಳಿದ ಅನೇಕ ಸಾಹಿತಿ ಮಿತ್ರರು ಅದು ಕೂಡಲೇ ಪ್ರಕಟವಾಗ ಬೇಕೆಂಬ ತಮ್ಮ ಸದಿಚ್ಛೆಯನ್ನು ವ್ಯಕ್ತಮಾಡಿ ಆಗಾಗ ಪತ್ರಗಳನ್ನು ಬರೆಯ ತೊಡಗಿದರು. ನನ್ನಿಂದ ಇದು ಕೂಡಲೇ ಸಾಧ್ಯವಾಗುವಂತಿರಲಿಲ್ಲ. ಇದಕ್ಕೆ ನನ್ನ ಆರ್ಥಿಕ ತೊಂದರೆಯೇ ಕಾರಣವಾಗಿತ್ತೆಂದು ಹೇಳುವದೇ ಬೇಡ. ಈ ಅನುಭವ ಸಾಹಿತಿಗಳಾಗಿ ಬಾಳುವವರ ಅಮೂಲ್ಯವಾದ ಸೊತ್ತು.

ಗೋಕಾಕದ ತರುಣ ವಕೀಲರೂ, ನನ್ನ ಗೆಳೆಯರೂ ಆದ ಶ್ರೀಮಾನ್ ಎಸ್. ಆರ್. ಪಾಟೀಲ ಅವರು ಈ ಪ್ರಕಟನೆಗಾಗಿ ನೆರವನ್ನು ನೀಡದಿದ್ದರೆ ಇದು ಈಗಲೂ ಸಾಧ್ಯವಾಗುತ್ತಿರಲಿಲ್ಲ. ಶ್ರೀ. ಎಸ್. ಆರ್. ಪಾಟೀಲ ಅವರು ಉದಾರಹೃದಯದಿಂದ ನೆರವನ್ನು ನೀಡಿ ಉಪಕಾರಮಾಡಿದ್ದಕ್ಕಾಗಿ ಅವರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ. ನನ್ನ ' ಸಾಹಿತ್ಯ–ಸೇವಾ–ಮಂದಿರ ' ವು ಅವರಿಗೆ ಚಿರ ಋಣಿಯಾಗಿದೆ.

ಮುದ್ರಣಕ್ಕಾಗಿ ಸುಂದರವಾದ ಹಸ್ತಪ್ರತಿಗಳನ್ನು ಸಿದ್ಧಮಾಡಿಕೊಟ್ಟ ನನ್ನ ಸಹೋದ್ಯೋಗಿಗಳೂ, ಆತ್ಮೀಯ ಗೆಳೆಯರೂ ಆದ ಶ್ರೀ. ಪಿ. ಟಿ. ಕುಲಕರ್ಣಿ, ಎಮ್ ಎ. ಅವರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಅಲ್ಪಕಾಲದಲ್ಲಿಯೇ ಅಂದವಾಗಿ ಮುದ್ರಿಸಿಕೊಟ್ಟ ಸಾಧನಾ ಮುದ್ರಣಾಲಯದ ಒಡೆಯರಾದ ಗೆಳೆಯ ಶ್ರೀ. ಕುಲಕರ್ಣಿ ಶೇಷಗಿರಿರಾಯರಿಗೆ ಉಪಕೃತನಾಗಿದ್ದೇನೆ.

ಕೊನೆಯದಾಗಿ, ಶ್ರೀಮಂತರೂ, ಉದಾರಚರಿತರೂ ಆದ ಶ್ರೀಮಾನ್ ವೆಂಕಪ್ಪಾ ಅಣ್ಣಾ ಸಕ್ರಿ ಅವರು ಈ ಹೊತ್ತಿಗೆಯ ಕಾಣಿಕೆಯನ್ನು ಸ್ವೀಕರಿಸಿ ನನ್ನನ್ನು ಸಂತೋಷಗೊಳಿಸಿದ್ದಾರೆ. ಅದಕ್ಕಾಗಿ ಅವರಿಗೆ ನಾನು ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸಾಹಿತ್ಯ-ಸೇವಾ ಮಂದಿರ
ಗೋಕಾಕ
೧೫-೯-೧೯೫೩

**ಕೃಷ್ಣಮೂರ್ತಿ ಪುರಾಣಿಕ**

# ಪಾತ್ರ ಪರಿವಾರ

| | | |
|---|---|---|
| ರಾಧೇಯ | : | ತೇಜಸ್ವಿನಿ |
| ಅಂಗವಮಾತೆ (ಸಾಕುತಾಯಿ) | : | ಕುರುಲಕ್ಷ್ಮಿ |
| ಕುಂತೀದೇವಿ (ತಾಯಿ) | : | ಆಕೃತಿ |
| ವಿಷ್ಣುಭಕ್ತ | : | ಭವಿಷ್ಯಸೂಚಿ |
| ಡಂಗುರದವ | : | ಶಕ್ತಿನಿ |

ಡಾಕಿನಿ, ಕೋರೆದಾಡೆ, ಮರುಳುಗಳು,

ಸೈನ್ಯಾಧಿಕಾರಿ, ದಂಡಾಳುಗಳು.

# ರಾಧೇಯ

## ದೃಶ್ಯ ಒಂದು

[ ಹಸ್ತಿನಾಪುರದ ಬೀದಿಯಾಗುಂಟ ಡಂಗುರದ ದನಿ ಕೇಳಬರುವಂತೆಯೇ ತೆರೆಯು ಮೇಲಕ್ಕೇಳತೊಡಗುವುದು. ತೆರೆಯು ಸಂಪೂರ್ಣವಾಗಿ ಮೇಲಕ್ಕೆದ್ದಾಗ ಸಾರುವವನು ರಂಗಮಧ್ಯದಲ್ಲಿ ನಿಂತು ಎತ್ತರವಾದ ದನಿಯಲ್ಲಿ ಜನರನ್ನು ಕೂಗಿಕೊಳ್ಳುತ್ತ ಡಂಗುರವನ್ನು ಹೊಯ್ಯತೊಡಗುವನು. ]

**ಡಂಗುರದವ:—**

ಕುರುರಾಜಧರಿತ್ರೀ ಮಂಡಲಾಂಕಿತರಾಗಿ
ಶೋಭಿಸುವ ಜನಗಳಿರ! ಸಂಪನ್ನ ಪ್ರಜಗಳಿರ!
ಶೂರ ಸೈನಿಕರಾಗಿ ಬಾಳುತಿಪ ಯೋದ್ಧರೇ!
ನಿಮಗೆಲ್ಲ ವಾರ್ತೆಯಿದೆ ಕೇಳಬನ್ನಿರಿ ಬೇಗ.
ಸಂಧಾನಕಾರ್ಯದೊಳು ವಿಫಲಮಾನಿಸನಾಗಿ
ತೆರಳಿರುವ ಕೃಷ್ಣನವ ಬೇಕೆಂದೆ ಸಂಧಿಯನು
ಮುರಿದು ಕೆಟ್ಟಿಹನಿಂದು. ರಣರಂಗಕಾಹ್ವಾನ
ವಿತ್ತು ಹೋಗಿಹನಿಂದು. ಸಂಗರದ ಕರೆಯಿದನು
ಮನ್ನಿಸಿದ ಕೌರವನು ಕಾಳೆಗವ ಹೂಡಿಹನು.
ಕುರುಭೂಮಿಯೆಲ್ಲವೂ ಕಾಳೆಗದ ಕಣವೆಂದು
ಸೇನಾನಿಗಳಿಗೆಲ್ಲವೀದಿನವೆ ಕರ್ಣದೊರೆ
ಶಾಸನವನಿತ್ತಿಹನು. ಕೌರವನ ರಾಜ್ಯದಲಿ
ಬಾಳಿ ಬದುಕುವ ನೀವು ದೊರೆಯ ಶಾಸನವನ್ನು
ಕಿವಿದೆರೆದು ಕೇಳುವುದು. ಕೇಳುವುದು! ಕೇಳುವುದು!

[ ಜಾಂಗಟೆಯನ್ನು ಹೊಯ್ಯುತ್ತ ಡಂಗುರದವನು ಮುಂದೆ ಸಾಗುವನು. ಅವನ ಬೆನ್ನ ಹಿಂದೆಯೇ ವಿಷ್ಣುಭಕ್ತನೊಬ್ಬನು ಕದಡಿದ ಮನಸ್ಸಿನಲ್ಲಿ ಹಾಡುತ್ತ ಪ್ರವೇಶಿಸುವನು.]

ವಿಷ್ಣುಭಕ್ತ— (ತಂಬೂರಿಯನ್ನು ನುಡಿಸುತ್ತ)

ಏನಿದನುಚಿತವೇನಿದನುಚಿತ
ವೇನಿದನುಚಿತವಾಯಿತು
ಪರಮ ಕರುಣಾಸಿಂಧು ಸನ್ನಿಧಿ
ಯಲ್ಲಿ ಸಂಧಿಯು ಮುರಿಯಿತು.

ಜಗದ ಶಾಂತಿಯ ಕಾವ ಬಿರುದಿನ
ಹರಿಯ ಕೃಪೆ ಹಗೆವೋರಿತು.
ಶಾಂತಿಗಾಗಿಯೆ ಬಂದ ದೇವನ
ಶಾಂತ ಮೂರ್ತಿಯೆ ಕದಡಿತು.

ಹರಿಯ ಹಗೆ ಹೊಗೆದೋರುತುರುಹಲು
ಬಾಳಿ ಬದುಕುವನಾವನು?
ದೇವ ಕೃಪೆಯನು ಮೀರಿ ಜಗದೊಳು
ನಿಂತ ಬಂಟನದಾವನು?

ರಾಯ ಸಭೆಯೊಳಗಿರ್ದ ಹಿರಿಯರು
ಮೌನಮುದ್ರೆಯನಾಂತರೆ!
ಅರರೆ! ಕೌರವರಾಯ ದುಡುಕಲು
ಸಂಗರಕ್ಕನುವಾದರೆ!

ಏನಿದನುಚಿತವೇನಿದನುಚಿತ
ವೇನಿದನುಚಿತವಾಯಿತು.
ಯುದ್ಧ ಘೋಷಣೆಯಲ್ಲಿ ನಾಡಿನ
ಶಾಂತಿ ತಲೆಕೆಳಗಾಯಿತು.

( ತೆರೆಯಲ್ಲಿ ಕಹಳೆಯ ಧ್ವನಿಯು ಕೇಳಬರುವದು. )

ಜೀವ ಝಲ್ಲೆನುತಹಂತೆ ಕಾಳೆಗ
ಕಹಳೆ ಕೂಗುತಲಿರುವುದು
ಸಾವಿಗೌತಣವೀವ ತೆರದೊಳು
ನಾಡ ಕುಳಗಳ ಕರೆವುದು.

ಕದಡಿ ಹೋಯಿತು ಶಾಂತಿ ನಾಡಿನ
ಜೀವ ತಲ್ಲಣಗೊಂಡಿತು.
ಸಮರಕೆಲ್ಲಿದೆ ಕೊನೆಯು ನೆತ್ತರ
ಹೊಳೆಯೆ ಬಿತ್ತರ ಹರಿವುದು.

ಕಾಲರಾಯನ ಕೂಳಿಗಾಗಿಯೆ
ಸಮರ ಸನ್ನಹವಾಯಿತೊ!
ಏನಿದನುಚಿತವೇನಿದನುಚಿತ
ಏನಿದನುಚಿತವಾಯಿತೊ!

(ನಿಟ್ಟುಸಿರನ್ನೆಳೆದು) ಕುರುಕುಲದ ಹಿರಿಯರೂ ಆಚಾರ್ಯಪುರುಷರೂ
ಕುರುಪತಿಗೆ ಮನಸೋತು ಸಂಗರವ ಕರೆದನ್ನು
ಕಾಲಮಹಿಮೆಯ ಕೇಡು. ನಾಡಿಗಿದು ದುರ್ದೆಶೆಯು.
ಸೈನಿಕರ ರಾಜ್ಯದಲಿ ಶಾಂತಿಯೆಂಬುವದಿದೆಯೆ?.
ಗೋರಿಗಂಡಿತು ಶಾಂತಿ! ಕುರುಮನದ ಬಗೆ ಭ್ರಾಂತಿ!
ಕರ್ಣನದೆ ಈ ಕ್ರಾಂತಿ!

**ಸೈನ್ಯಾಧಿಕಾರಿ**— (ಪ್ರವೇಶಿಸುತ್ತ) ಭಾರತದ ಸಮರವೇ
ಶಾಂತಿಗಾಗಿದೆ ಜೋಗಿ! ಶಾಂತಿಯೇ ನಮ್ಮ ಗುರಿ.

**ವಿಷ್ಣುಭಕ್ತ**— (ನೆಟ್ಟ ದೃಷ್ಟಿಯಲ್ಲಿ)
ನೆತ್ತರೋಕುಳಿಯಾಡಿ ಶಾಂತಿಯನು ತರಬಹುದೆ?

**ಸೈನ್ಯಾಧಿಕಾರಿ**— ಸಮರದಿಂದಲೆ ಶಾಂತಿ! ಸಮರದಿಂದಲೆ ಕ್ರಾಂತಿ!

**ವಿಷ್ಣುಭಕ್ತ**— (ವಿಹ್ವಲನಾಗಿ) ಈ ಮಾತು ಬರಿ ಭ್ರಾಂತಿ!
ಸಮರವಲ್ಲಿಯು ಬೇರು ಕುಡಿವ ನೆತ್ತರ ನೀರು

ಸವಿ ಫಲವನೀಯುವವೆ? ಸಮರವೇ ಮಾಪಾರಿ!
ಶಾಂತಿಗದು ಹೆಮ್ಮಾರಿ!

**ಸೈನ್ಯಾಧಿಕಾರಿ—** (ಗದ್ಗದಿಸುತ್ತ) ಸಮರಶಕ್ತಿಯು ಬಲ್ಲ
ಗಂಡುಗಲಿಗಳ ಮುಂದೆ ಈ ಮಾತನಾಡದಿರು
ದಾಸಯ್ಯ! ಕಾಳಿಗದ ತುತ್ತೂರಿ ಘೋರೆಂದು
ಮೊಳಗುತಿದೆ. ಕುರುಭೂಮಿಯೆಲ್ಲವೂ ಕಾಳಿಗವ
ನುಡಿಯುತಿದೆ.

**ವಿಷ್ಣುಭಕ್ತ—** (ಸಂಕಟದಿಂದ) ಕೌರವನ ರಾಜ್ಯವೇ ಧಗಧಗಿಸಿ
ಉರಿಯುತಿದೆ.

**ಸೈನ್ಯಾಧಿಕಾರಿ—** ಕರ್ಣನಾಶ್ರಯದಲ್ಲಿ ಕಳಕಳಿಸಿ ನಿಲ್ಲುತಿದೆ
ಮಾತು ನಿಲ್ಲಿಸು ಜೋಗಿ!

**ವಿಷ್ಣುಭಕ್ತ—** ಕರ್ಣನಾಶ್ರಯವಂತೆ! ಕುರುಭೂಮಿಯೆಲ್ಲವೂ
ಕಾಳಿಗದ ಕಣವೆಂದು ಶಾಸನವನಿತ್ತವನು
ಕರ್ಣನಾಗಿಹನಂತೆ! ಕೌರವನ ಬುದ್ಧಿಗೇ
ಮಂಕು ಕವಿದಿರುವಾಗ ದುಷ್ಟ ಚೇತನಗಳಿಗೆ
ಸದವಕಾಶವೆ ಮತ್ತೆ! ಭೀಷ್ಮರೇನಳಿದರೇ?
ದ್ರೋಣರೇನಳಿದರೇ? ಸೇನಾಧಿಪತ್ಯವನು
ಕರ್ಣನಿಗೆ ಕೊಟ್ಟಾಯ್ತೆ? ಮಾತು ಸೋಜಿಗವಯ್ಯ!
ಸೋಜಿಗದ ಸುದ್ದಿಯಿದು.

**ಸೈನ್ಯಾಧಿಕಾರಿ—** (ಉಲ್ಲಸಿತನಾಗಿ) ಕುರುಬಲದ ನಾಡಿಯೇ
ಕರ್ಣದೊರೆಯಾಗಿರಲು ಸೋಜಿಗದ ಮಾತೆಲ್ಲಿ?
ದೊರೆಯು ಗುಟ್ಟನು ಬಲ್ಲ ಗಟ್ಟಿಗನು ಧೀರನಿವ
ದೊರೆಯ ಸಾಹಸಬಲದ ಸ್ಫೂರ್ತಿಯೇ ಆಗಿಹನು.
ದೊರೆಯಂತರಂಗವೇ ಕರ್ಣನದು ಬಲ್ಲೆಯಾ?
ಶೌರ್ಯದಲಿ ಧೈರ್ಯದಲಿ ಕಾಳಿಗದ ಕಾರ್ಯದಲಿ
ವೀರಕರ್ಣನಿಗಾರು ಸರಿದೊರೆಯು ಹೇಳುವಿಯ?

ವಿಷ್ಣುಭಕ್ತ— ಕರ್ಣನಾರ್ಪನು ಬಲ್ಲ ನನಗಿದನು ಹೇಳದಿರು;
ಯುದ್ಧವೆಂದರೆ ಸಾಕು ಕರ್ಣನೆದೆ ಕುಣಿಯುವುದು.

ಸೈನ್ಯಾಧಿಕಾರಿ— ( ಅಭಿಮಾನದಿಂದ ) ದರಗಂಡ ಕಲಿಯವನು.
ಸೈನಿಕರ ಸುತ್ರಾಣ! ದೊರೆಗೆ ಪಂಚಪ್ರಾಣ!
ಮುರಿದ ಸಂಧಿಗೆ ಮೊದಲು ನಾಂದಿಯನ್ನೆಸಗಿರುವ
ಪರಮಸೇವಕನವನು ಕೌರವನ ಬಲದೋಳು.

ವಿಷ್ಣುಭಕ್ತ— ರಾಧೇಯನೊಬ್ಬನೇ . . . . . . .

ಸೈನ್ಯಾಧಿಕಾರಿ— ( ಅವಸರದಿಂದ ) ಸ್ವಾಮಿನಿಷ್ಠನು ದೊರೆಗೆ.

ವಿಷ್ಣುಭಕ್ತ— ( ಸಹಿಸದೆ ) ಸಮರನಿಷ್ಠನು ಅಣ್ಣ ! ಆ ನಿಮ್ಮ ರಾಧೇಯ !
ಭಾರತವ ಕಲಕಿದನು. ಶಾಂತಿಯನು ಕದಡಿದನು !
ರಾಧೇಯನಿಂದಲೇ ಕುರುಭೂಮಿಯೆಲ್ಲವೂ
ಕಾಳಗದ ಕಣವಾಯ್ತು. ಭಗ್ನಸಂಧಾನದಲಿ
ಸಂಗರವೆ ಧರೆಗಾಯ್ತು

ಸೈನ್ಯಾಧಿಕಾರಿ— ( ಅಟ್ಟಹಾಸದಿಂದ ) ಕರ್ಣನದೆ ಮಾತಾಯ್ತು
ಅವನ ಕೈ ಮೇಲಾಯ್ತು, ಸೈನಿಕರ ಗೆಲುವಾಯ್ತು.

ವಿಷ್ಣುಭಕ್ತ— ಸೈನಿಕರ ಗೆಲುವೊಂದು ಶಾಶ್ವತದ ಗೆಲುವಲ್ಲ.
ಹೇಳದಿರು ನೀನಣ್ಣ ! ಸಮರಸಾಹಸದಲ್ಲಿ
ಯಾವುದಿದೆ ಹಿರಿಯಾಸೆ, ಸರ್ವನಾಶವೆ ಜಗಕೆ !
ಕೊಲೆಗೊಂಬ ಮನದಲ್ಲಿ ಬಾಳಶಾಂತಿಯ ಬೀಜ
ಮೊಳೆತು ಚಿಗಿಯುವದಿಲ್ಲ. ಯುದ್ಧವೆಂದರೆ ಕೇಡು
ಮಾನವನ ಬಗೆಗೇಡು. ಸಂಸ್ಕೃತಿಗೆ ಲಜ್ಜೆಯದು.
ದಯೆಯು ರಾಕ್ಷಸನಾಗಿ ವಾತ್ಸಲ್ಯ ವಿಷವಾಗಿ
ಸೋದರಿಕೆ ಸಾವಾಗಿ ನಿಲ್ಲುತಿಹ ಸಮರದಲಿ
ಪುರುಷಾರ್ಥವಾವುದಿದೆ ? ( ತೆರೆಯಲ್ಲಿ ಮತ್ತೆ ತುತ್ತೂರಿ. ಅದನ್ನು ಕೇಳಿದ ಸೈನ್ಯಾಧಿಕಾರಿಯು ವಿಷ್ಣುಭಕ್ತನನ್ನು ಕೆಕ್ಕರಿಸಿ ನೋಡುತ್ತ )

**ಸೈನ್ಯಾಧಿಕಾರಿ**— ( ಗದ್ದರಿಸುತ್ತ ) ಮಾತು ನಿಲ್ಲಿಸು ಜೋಗಿ!
ನೀನಾವ ಪಂಡಿತನು? ರಾಜಕೀಯವ ಬಲ್ಲ
ರಾಜಪಂಡಿತನಂತೆ ರಾಜಕಾರಣವನ್ನು
ಸಿಕ್ಕಂತೆ ಗಳಪದಿರು. ರಾಜಕಾರಣವೇನು
ಹರಿನಾಮಸ್ಮರಣೆಯೆ? ( ತುತ್ತೂರಿಯು ಸಪ್ಪಳ ಬಂದ ಕಡೆಗೆ ಧಾವಿಸುವನು. )

**ವಿಷ್ಣುಭಕ್ತ**— ( ದೀರ್ಘವಾದ ಉಸಿರನ್ನೆಳೆದು )

ಹರಿಹರೀ! ದಾಯಾದಿ ಮಾತ್ಸರ್ಯವೆಬ್ಬಿಸಿದ
ಹೊಗೆಯೆನಿತು ಕಾಳರಕ್ಕಸನಂತೆ ಮೇಲೇರಿ
ಬಂತಕಟ! ಶಿಷ್ಯವತ್ಸಲರಾದ ದ್ರೋಣರೂ
ಮೊಮ್ಮಗನು ಸಲುಹಿರುವ ಧೀಮಂತ ಭೀಷ್ಮರೂ
ರಾಜಸಭೆಯೊಳಗಿರ್ದ ಕುರುಪ್ರಮುಖ ಹಿರಿಯರೂ
ವಿಫಲ ಸಂಧಿಯನೆಂತು ಬರಮಾಡಿಕೊಂಡರೋ
ಪಕ್ಷಪಾತವನೆಂತು ಬಗೆದಪ್ಪಿಕೊಂಡರೋ
ಬಗೆಗೆ ನಿಲುಕದ ಮಾತು; ಬುದ್ಧಿಗರಿಯದ ಮಾತು.
ಈ ಪಕ್ಷಪಾತದುರಿ ಭುಗಿಲೆಂದು ಹಬ್ಬುತಿರೆ
ನಾಡ ಕಾಯುವರಾರು? ಮನೆಯೊಂದ ನಿಲ್ಲಿಸಿದ
ಮನೆತನದ ಹಿರಿಯರೇ ಮನೆಯ ಮಕ್ಕಳ ಕೂಡ
ಕಾಳಗದ ಹೂಡಿದರೆ ಮನೆಯೆ ಮುರಿಯುವುದೇನು
ಅಚ್ಚರಿಯ ಮಾತಲ್ಲ. ಒಂದೆ ಮನೆತನದವರೆ
ಯುದ್ಧ ಹೂಡಿದರಿಂದು. ಒಂದೆ ಮನೆತನದವರೆ
ಬಿದ್ದು ಸಾಯುವರಿಂದು. ಸಾವು ನೋವಿಗೆ ಸಿಕ್ಕು
ಜರ್ಜರಿತರಾಗುವರು ಒಂದೆ ಮನೆತನದವರೆ!

[ ತೆರೆಯಲ್ಲಿ ಕುರುಸಾರ್ವಭೌಮನಿಗೆ ಜಯವಿರಲಿ! ಗಂಡುಗಲಿ ಕರ್ಣನಿಗೆ ಜಯವಿರಲಿ! ಎಂಬ ಜಯಜಯಕಾರವು ಕೇಳಬರುವದು. ಈ ಜಯಜಯಕಾರವನ್ನು ಕೇಳಿ ವಿಹ್ವಲನಾಗಿ– ]

ಬಾಂಬಯಲು ಬಿರಿವಂತೆ ತುಂಬುತಿದೆ ಜಯಘೋಷ
ಸೈನಿಕರ ರಣಘೋಷ. ಎತ್ತನೋಡಿದರತ್ತ
ಕರ್ಣನದೆ ಅಗ್ಗಳಿಕೆ. ಕರ್ಣನದೆ ಕೈವಾಡ.
ಸಮರದುಂಧುಬಿಯಲ್ಲಿ ಕಾಳಹಸ್ತನು ಕರ್ಣ!
ಯುದ್ಧಾಪರಾಧದೊಳಗಗ್ರಗಣ್ಯನು ಕರ್ಣ!
ಶಾಂತಿಯನು ಕದಡಿದನು. ಕುರುಮನವ ಕಲಕಿದನು
ಮಣ್ಣುಮುಕ್ಕಿತು ಶಾಂತಿ! ಭಾರತದ ಸುಖ ಶಾಂತಿ!
ಬರಬಹುದೆ! ಹರಿಹರೀ! ಬರಬಹುದೆ ನಿಜಶಾಂತಿ!
ಭಾರತದ ನವಕಾಂತಿ! [ ಎಂದು ಕಣ್ಣುಹನಿಗಳನ್ನು ತೊಡೆದುಕೊಂಡು ಆಕಾಶದ ಕಡೆಗೆ ಕೈಮಾಡಿ ಕೇಳುವಂತೆ ಮುಖವನ್ನು ಮೇಲೆತ್ತಿದ ವಿಷ್ಣುಭಕ್ತನಿಗೆ ರಣದುಂಧುಬಿಯ ನಿನಾದವು ಕೇಳಿಬರಲು ಅವನು ಹೌಹಾರಿದಂತೆ-- ]

— ತೆರೆ —

## ದೃಶ್ಯ ಎರಡು

[ ಉದ್ವೇಗಪೂರ್ಣವಾದ ಮುಖವನ್ನು ಎರಡೂ ಕೈಗಳಿಂದ ಮುಚ್ಚಿಕೊಂಡು ಆಸನದಲ್ಲಿ ಕುಳಿತ ರಾಧೇಯನು ತೆರೆ ಏಳುತ್ತಲೇ ದಿಗ್ಗನೇ ಎದ್ದು ಎಡೆಯಾಡತೊಡಗುತ್ತಾನೆ. ಸಹನಾತೀತವಾದ ಕಳವಳವನ್ನು ಸೂಸುವ ಕಣ್ಣುಗಳಲ್ಲಿ ವಿಚಾರಧಾರೆಯು ಮೊನೆಯು ಚುಚ್ಚಿದಂತೆ ಅವು ಕೆಂಪಗಾಗಿವೆ. ವಿಚಾರಗಳ ತಾಕಲಾಟದಲ್ಲಿ ಕಂಗೆಟ್ಟವನಂತೆ ಇನ್ನೂ ಭರದಿಂದ ಎಡೆಯಾಡತೊಡಗುತ್ತಾನೆ. ಆ ವಿಚಾರಭಾರವನ್ನೇ ನೂಕಿಬಿಡುವಂತೆ ನಿರಾಶೆಯಿಂದೊಮ್ಮೆ ಕೈಗಳನ್ನು ಚೆಲ್ಲುತ್ತಾನೆ. ಮತ್ತೆ ಅವುಗಳನ್ನೆತ್ತಿ ತಲೆಯನ್ನು ಹಿಡಿದುಕೊಂಡು ದಿಙ್ಮೂಢನಾದವನಂತೆ ಸುತ್ತಲೂ ಕಣ್ಣರಳಿಸಿ ನೋಡತೊಡಗುತ್ತಾನೆ. ಕೆಲನಿಮಿಷಗಳನ್ನು ಹೀಗೆ ಕಳೆದಮೇಲೆ ನಿರಾಶೆಯು ಅನೇಗವೇ ಮೂಡಿಬಂದಂತೆ ಕನವರಿಸತೊಡಗುತ್ತಾನೆ. ]

ರಾಧೇಯ— ಭಾನು ಸಂಭವನಂತೆ! ಕುಂತಿಯೇ ತಾಯಂತೆ!
ಹುಟ್ಟು ಹಗೆಯಾದವರು ಒಡಹುಟ್ಟಿದವರಂತೆ!
ಪಾಂಡುತನಯರೊಳಾನೆ ಹಿರಿಯ ಸೋದರನಂತೆ!
ಕೌರವನ ಕಡೆಗಣಿಸಿ ಪಾಂಡವರ ನೆಮ್ಮಿದರೆ
ಪಟ್ಟವೇ ನನಗಂತೆ! ಹೇಳಿದನು ಶ್ರೀಕೃಷ್ಣ!
( ಉಗ್ರನಾಗಿ ) ಮೋಸವಿದು! ಕಪಟವಿದು! ಭೇದದಲಿ ಹೊಕ್ಕಿರಿದ
ಕೃಷ್ಣಕಾರಸ್ಥಾನದತ್ಯುಗ್ರ ಶಸ್ತ್ರವಿದು!
ರಾಜಕಾರಣಪಟುವು ರಾಜನೀತಿಯ ತೋರು
ತೆನ್ನೆದೆಯ ಹಿಂಡಿರುವ ಕುಸ್ಸಿತದ ವಿಷವಿದುವು!
( ಕೊರಗಿನಿಂದ ) ಜೀವದುದ್ದಕು ಬಂದ ಜನುಮದರಿಯನು ಹೊತ್ತು
ನಾನಿನಿತು ಕಾಲವನು ನೂಕಿ ಬಾಳುತಲಿದ್ದೆ.
ನನ್ನ ಜನುಮದ ಕತೆಯನರಿತರೂ ಮರೆತಂತೆ
ಸ್ವಾಮಿ ಕಾರ್ಯದೊಳದನು ತೇಲಿಸಿಯೆ ಬಿಟ್ಟಿದ್ದೆ.
ವಿಧಿಯ ಕೈವಾಡದಲಿ ರಾಧೇಯನಾದೆನ್ನ
ದುರ್ದೈವದಪವಿಶೆಯ ದುರ್ವಿಲಾಸದ ಕಂಡು
ಮೊದಲೆಂದು ತತ್ತರಿಸಿ ಕೆಡದೆನ್ನ ಹೃದಯವೇ
ಹರಿಯ ಮಾತಿನ ಮೊನೆಗೆ ಕಲಕಿ ನಿಂತಿಹುದಿಂದು!

ಧರ್ಮಸಂಕಟಕೆನ್ನ ತಳ್ಳಿ ಕೊಡುವದಿಂದು!
(ಸಂಕಟವನ್ನು ತೋರುತ್ತ) ಕಾಲರುದ್ರನ ಕೊಡಲಿ ಸಿಡಿಲಗರ್ಭವ ತಾಳಿ
ಗುಡುಗಿನಾರ್ಭಟೆಯಲ್ಲಿ ಮೇಲ್ವಾಯ್ದು ಬಂದೆನ್ನ
ಹೃದಯಭಿತ್ತಿಯನೆರಗಿ ಮುನ್ನುಗ್ಗಿ ಬಂದರೂ
ಸಹಿಸುತಿಹ ವಜ್ರದೆದೆ ಜರ್ಜರಿತವಾಯಿತೆಲೆ!
ಧೃತಿಗೆಟ್ಟು ನಿಂತಿತೆಲೆ! ಮುರಹರನ ಮಾತಿನೊರೆ
ಯಿಂದುರ್ಕಿ ಬಂದ ಧಾರೆಯೊಳೆನ್ನ ಹೃದಯವೇ
ಸೀಳಿತೆಲೆ! ಸಪ್ತಶರಧಿಯ ನೀರು ನನ್ನೆದೆಯ
ತಿರುವಿನಲಿ ಸಮರ ಶಕ್ತಿಯ ಬಲವ ಗಿರ್ರೆಂದು
ತಿರುಗಿಸುತ ತೂರಿಯೇ ಬಿಟ್ಟಿತೆಲೆ! ಕುಸಿದ ಬಲ
ಕಂಗೆಟ್ಟು ತತ್ತರಿಸಿ ನಿಂತಿತೆಲೆ! ಕಾಳು ಮಾ-
ಡಿದನಯ್ಯೊ ಕೃಷ್ಣನೆಂಬವನಿವನು, ಭಾರತದ
ಕೋಳುಗುಳದ ಬಣ್ಣಗೆಡಿಸಿದನಿವನು!

[ತಲೆಗೂದಲಗಳನ್ನು ಜಗ್ಗಿಕೊಳ್ಳುತ್ತ ಭರದಿಂದ ಎಡೆಯಾಡುತ್ತಿರುವಾಗ ಅಂಗಮಾತೆಯು ಪ್ರವೇಶಿಸುವಳು. ಅವಳ ಮುಖದಲ್ಲಿ ಕಾತರತೆ ಮೂಡಿನಿಂತಿರುವುದು ಆಕಸ್ಮಿಕ ಚಿಂತೆಯ ಪರಿಣಾಮವಾದಂತೆ ಮುಖವು ಕಂದಿಹೋಗಿರುವದು. ಅವಳು ಹನಿಗೂಡಿದ ಕಣ್ಣುಗಳೊಡನೆ ಬಂದು]

**ಅಂಗಮಾತೆ** — ನಿನಗಾವ ಚಿಂತೆಯಿದೆ ಹೇಳಬಹುದೇ ಕಂದ!
ಬಿರುಗಾಳಿಯಂತೇಕೆ ಘೋರಿಡುತ್ತಿಹೆ ನೀನು.
ದಾರಿ ತಪ್ಪಿದ ಗಾಳಿ ಧರೆಯ ಸುತ್ತುವ ತೆರದಿ
ದಿನ ಹಗಲು ಕಳೆದರೂ ನಿಟ್ಟುಸಿರ ಸೂಸುತಿಹೆ.

**ರಾಧೇಯ**— (ಅವಳನ್ನು ನೇರವಾಗಿ ನೋಡುತ್ತ ಸಂಕಟ ತುಂಬಿದ ದನಿಯಲ್ಲಿ)
ಇಂದೆನ್ನ ಹೃದಯವೇ ಸಿಡಿದು ಬಿದ್ದಿಹುದಮ್ಮ!
ತೇಲಿ ಬಂದಿಹ ಕೂಸನಂದೆತ್ತಿ ಕೊಳ್ಳದೆಯೆ
ಜಲಸಮಾಧಿಯೊಳೆನ್ನ ಹೂಳದೇತಕ್ಕಿಂತು
ಸಾಕಿಸಲುಹಿದೆಯಮ್ಮ! ಜೀವನದ ಮುಗಿತಾಯ

ದಿಂದೇಳ್ವ ಜೀವವಿದು ನಿನ್ನ ಕಾರ್ಯವ ನೆನೆದ
ಆ ಪುಣ್ಯದಿಂದಲೇ ನಿನ್ನ ಪುಣ್ಯೋದರವ
ಪಡೆಯಬಹುದಾಗಿತ್ತು. ಮೀಂಗುಲಿಗ ಮಗನಾಗಿ
ಬಾಳಬಹುದಾಗಿತ್ತು. ಜೀವನದ ಸಫಲತೆಯ
ಕಾಣಬಹುದಾಗಿತ್ತು.

**ಅಂಗಮಾತೆ—** (ಕಾತರಳಾಗಿ) ಕರ್ಣಜೀವನದಲ್ಲಿ
ವಿಫಲತೆಯು ಮಾತಿಲ್ಲ; ಕೊರಗದಿರು ನನ್ನಯ್ಯ!
ಮೀಂಗುಲಿಗ ಧರ್ಮದೊಳು ಕ್ಷಾತ್ರವೃತ್ತಿಯ ತೋರಿ
ವೀರ ಕ್ಷತ್ರಿಯನಾಗಿ ಬಾಳಿ ಬದುಕುವ ನೀನು
ಸಂದು ಹೋಗಿಹ ಮಾತನಿಂದೇಕೆ ಚಿಂತಿಸುವೆ?

**ರಾಧೇಯ—** (ಕಳವಳದಿಂದ)
ಆ ಮಾತಿನೊಳಗಿಂದು ಸಿಡಿಲು ಗುಡುಗಾಡುವುದ
ನೇನು ಹೇಳಲಿ ತಾಯಿ!

**ಅಂಗಮಾತೆ—** (ಖಿನ್ನಳಾಗಿ) ನಿನ್ನ ಸಲುಹಿದ ತಾಯಿ ಕುಲಹೀನಳೆಂದಿಂತು
ಭಾವವನು ತೋರುವಿಯ?

**ರಾಧೇಯ—** (ಅವಸರದಿಂದ) ಕುಲಹೀನಳಾದವಳು
ನೀನಲ್ಲ ಮಾತಾಯಿ; ಪಡೆದ ಕರುಳನು ಜಲಕೆ
ಬಿಸುಟಿರುವ ಮಾಮಾರಿಗಾಮಾತು ಸಲ್ಲುವುದು.

**ಅಂಗಮಾತೆ—** ಒಳಿತೆನ್ನು ಕಂದಯ್ಯ! ವಿಧಿಯ ಸಂಕಲ್ಪದಲಿ
ಮಾನವರು ದುರ್ಬಲರು.

**ರಾಧೇಯ—** (ನೊಂದವನಂತೆ) ವಿಧಿಯು ದಬ್ಬಾಳಿಕೆಯ
ಬಹು ಘೋರ ತಂತ್ರವಿದು. ಕರ್ಣಜೀವನ ಕತೆಯು!
ಬಾಳಹೀನತೆಯಲ್ಲಿ ಜೀವನದ ಕಹಿಯೆದ್ದು
ಜೀವರಸದೊರತೆಯೇ ನಂಜಾಗಿ ನಿಂತಿರುವ
ಮಾತು ಸೂಕ್ಷ್ಮವು ತಾಯಿ.

**ಅಂಗಮಾತೆ**— ( ಕಳವಳದಿಂದ ) ಏಕಿಂತು ಕೆಡಕಾಡಿ
ಮನದ ದುಗುಡವ ತೋರಿ ಭಾವದುರಿಯೊಳ ಬೆಂದು
ಪ್ರಕ್ಷುಬ್ಧವಾಗಿಹೆಯೊ ನನಗಂತು ತಿಳಿಯದಿದೆ
ಮಿಂಗುಲಿಗರೆಂಬವರು ಸ್ವಾಮಿಭಕ್ತರು ಕಂದ
ನೀನವರ ಮಧ್ಯದಲಿ ಬೆಳೆದು ಬಂದವನಿರಲು
ಸ್ವಾಮಿ ಭಕ್ತಿಯ ತೋರಿ ಧನ್ಯವಾಗುವ ಕಾಲ
ಪರಿಪಕ್ವವಾಗಿರಲು, ನಂದ ಮಾತನ್ನಿಂತು
ಯೋಚಿಸುವ ಮನದಲ್ಲಿ ಕಾರ್ಯ ಹಾನಿಯು ಕಂದ !
ಕೌರವನ ಕಾರ್ಯವೇ ನಿನ್ನ ಬದುಕಾಗಿರಲು
ಸ್ವಾಮಿಭಕ್ತಿಯೆ ನಿನ್ನ ಜೀವದುಸಿರಾಗಿರಲು
ವೀರ ಕರ್ಣನ ಕೆಣಕಿ ಬಾಳುತಿಹ ವಿಧಿಯೊಂದು
ಜಗದಿ ಜೀವಿಪುದಿಲ್ಲ. ಸುಮ್ಮನೇ ಬೇಯದಿರು.
ವಿಧಿ ತಂದ ದೈವವೇ ನಿನ್ನ ಕೀರ್ತಿ ಧ್ವಜವ
ನುನ್ನತೋನ್ನತವಾಗಿ ಮೆರೆಸುತಿಹ ಮಾತೇನು
ವ್ಯರ್ಥವಾಗಿಹುದಿಲ್ಲ.

**ರಾಧೇಯ**— ( ತನ್ನಲ್ಲಿ ) ಸತ್ಯವಂತನು ಹರಿಯು
ಸತ್ಯವನ್ನುಸುರಿದನು. ನಿಷ್ಠೆವಂತಳು ತಾಯಿ
ನಿಜವನೇ ಹೇಳುವಳು. ಈ ಸತ್ಯ–ನಿಷ್ಠೆಗಳೆ
ದಾವಾಗ್ನಿಯಂತೆನ್ನ ಹೃದಯವನ್ನುರಿಸುತಿವೆ.
ಕಿಡಿಗಳನು ಸುರಿಸುತಿವೆ. ಹುಚ್ಚು ಮನದೊಳಗೆದ್ದ
ಕಿಚ್ಚೆನ್ನ ಸುಡುತಿರಲು ನಾನಾವ ಭಕ್ತಿಯನು
ಸ್ವಾಮಿಕಾರ್ಯದೊಳಿಡಲಿ! ಸ್ವಾಮಿಯನು ಬಿಸುಟಲಾ ?
ನಾನೆ ಅವನಾಗಿಹೆನು ! ಕಾಳೆಗದೊಳಿರಿಯಲಾ ?
ಹಗೆಗಳೇ ಸೋದರರು ! ( ಹೊರಗೆ )
ತಾಯಿಯೆದೆಯಿಂದುಗುವ
ಸದಭಿಮಾನದ ಸೆಲೆಗೆ ಶತಕೋಟಿ ಸಲ ನಮಿಸಿ
ಬಾಗುವೆನು ನನ್ನಮ್ಮ! ಕೌರವನ ಕೀರ್ತಿಯೊಳ

ಗೆನ್ನ ಕೀರ್ತಿಧ್ವಜವು ಪಾರಿ ಪಕ್ಕವ ಪಡೆದು
ಬಾನ ಮೀಟುತಲಿರುವ ಸತ್ಯ ಮಾತೇ ಇಂದು
ಪುಳ್ಳು ಮೊನೆಯಂತೆನ್ನ ಹೃದಯವನು ಚುಚ್ಚುತಿದೆ.
ಘೋರ ವೇದನೆಯಲ್ಲಿ ಸತ್ವವೇ ಚೀರುತಿದೆ.
ನಾನಾರು? ನನ್ನ ಜೀವವಿದೇನು? ಜೀವನಫ
ಲತೆಯೇನು? ಎಂಬುಸಿರೆ ಹೃದಯಾಂತರಾಳದೊಳು
ಗುಡುಗಾಡಿ ಕೇಳುತಿದೆ. ಅಂತರಂಗದ ವಾಣಿ
ಗಾವ ಉತ್ತರ ಕೊಡಲಿ?

**ಅಂಗವಾತೆ—** (ಭೀತಿಯಿಂದ) ನೀನಾರು ಎಂದರೇಂ?
ಸ್ವಾಮಿ ಭಕ್ತನು ನೀನು! ವೀರ ಕರ್ಣನು ನೀನು!
ಕೌರವನ ಕೀರ್ತಿಯೊಳು ವೀರ ಬಾವುಟ ನೀನು!

**ರಾಧೇಯ—** (ತತ್ತರಿಸುತ್ತ) ಆ ಸ್ವಾಮಿಗಾಗಿಯೇ . . .

**ಅಂಗವಾತೆ—** (ವಿಶ್ವಾಸದಿಂದ) ಮೀಸಲಾಗಿಹುದಯ್ಯ
ನಿನ್ನ ಜೀವನವಿಂದು.

**ರಾಧೇಯ—** (ಹನಿದುಂಬಿ) ಮಾತಾಯಿ! ಮಾತಾಯಿ!

**ಅಂಗವಾತೆ—** ಮೀಂಗುಲಿಗರೆಂಬವರು ಸತ್ಯವಂತರು ಕಂದ!
ಕಪಟ ಮೋಸಗಳವರ ಸುತ್ತಿ ಸುಳಿಯುವದಿಲ್ಲ.
ಸ್ವಾಮಿ ಕಾರ್ಯದೊಳವರು ದೃಢ ಪ್ರತಿಜ್ಞರು ನೋಡು!
ಮನದ ಮರ್ಗಂಡವಿದೇನು? ಕಣ್ಣೀರ ಹನಿಯೇನು?
ನನಗಂತು ತಿಳಿಯದಿದೆ. ಕದಡಿ ಕಂಗೆಟ್ಟಿರುವ
ಮನದ ಪರಿಯೇ ಕೇಡು. ಶುದ್ಧ ಸ್ನಾನದೊಳದರ
ಕೊಳೆಯು ನಿರ್ಮಲವಾಗಿ ತಾಳ ತಪ್ಪಿದ ಮನಕೆ
ನೆಮ್ಮದಿಯು ತರಬಹುದು ಹದಗೆಟ್ಟ ಹೃದಯದಲಿ
ಶಾಂತಿ ಮೂಡಲುಬಹುದು. ಅದಕಾಗಿ ಬೇಗೇಳು!
ಭಾಗ್ಯ ಭಾಗೀರಥಿಯ ಪುಣ್ಯ ಜಲದೊಳು ಮಿಂದು
ಹೃದಯ ಕಿಲ್ಮಿಷಗಳನು ತೊಳೆದು ಬಾ! ಕಳಕಳಿಸಿ

ಬೆಳಗಿ ಬಾ ! ಸೂರ್ಯಗರ್ಘ್ಯವನಿತ್ತು ಶಾಂತಿಯನು
ಹೊಂದಿ ಬಾ ! ನಿನಗೆನ್ನ ಪರಕೆಯಿದೆ ಹೋಗೇಳು.
ಕಂದಯ್ಯ !

ರಾಧೇಯ— ( ಪೀತಾಂಬರಧಾರಿಯಿಂದ ಹತನಾದವನಂತೆ ತಾಯಿಯನ್ನು ನೋಡುತ್ತ )
ನೀನಿತ್ತ ಆಜ್ಞೆಯೇ ಪರಮಪಾವನ ತಾಯಿ !
ಅಂತೆಯೇ ಎಸಗುವೆನು. ಜಗದ ಮಕ್ಕಳಿಗೆಲ್ಲ
ದಾರಿ ತೋರುವ ಭಾನು ನನಗಾವ ದಾರಿಯನು
ತೋರಿಯುದ್ಧರಿಸುವನೊ ಕಾಣುವಾತುರವನ್ನು.

ಅಂಗವಾತೆ— ಆ ಜಗದ ತಂದೆಯೇ ಹೆತ್ತಯ್ಯನಂತಿಂದು
ನೆಮ್ಮದಿಯನೀಯುವನು. ತಿಳಿಬೆಳಗ ನೀಡುವನು.
ಜಗವ ನೋಡುವ ತಂದೆ ತಾತನಲ್ಲವೆ ನಿನಗು ?

ರಾಧೇಯ— ( ಹೆಚ್ಚು ಮಾತನಾಡುವ ಮನಸ್ಸಿಲ್ಲದ ಆತುರದಲ್ಲಿ )
ಆ ತಾತನಿಂದೆನಗೆ ಶಾಂತಿ ಲಭಿಸಲಿ ತಾಯಿ !
ಈಗಲೇ ಹೊರಡುವೆನು.

[ ಅಂಗಮಾತೆಗೆ ಪೊಡಮಟ್ಟು ರಾಧೇಯನು ಉದ್ವಿಗ್ನತೆಯೇ ಮೂರ್ತಿವೆತ್ತು ಹೋಗುವಂತೆ ಸತ್ರನೇ ಸರಿದು ಹೋಗುವನು. ಅವನು ಹೋದ ನಿಟ್ಟನ್ನೇ ವ್ಯಾಕುಳಚಿತ್ತಳಾಗಿ ದೃಷ್ಟಿಸುತ್ತ ]

ಅಂಗಮಾತೆ— ಶೌರ್ಯದಲಿ ಧೈರ್ಯದಲಿ ಸಮರ ಸಾಹಸದಲ್ಲಿ
ಕೆಚ್ಚೆದೆಯ ತೋರುತಿಹ ರಾಧೇಯನೇಕಿಂತು
ಹೊಯ್ದಾಡಿ ಕೆಡುತಿಹನೊ ನನಗಂತು ತಿಳಿಯದಿದೆ.
ಹರಿಯ ಕಾಣುವ ಮುನ್ನ ಸಮರವೆಂದರೆ ಕರ್ಣ
ಕುಣಿದು ನಿಲ್ಲುತಲಿದ್ದ. ಅವನಾವ ವಿಷದುಸಿರ
ಬೀಸಿ ಕಂಗೆಡಿಸಿದನೊ, ಮೋಸವನು ತುಂಬಿದನೊ
ನನಗೊಂದು ತಿಳಿಯದಿದೆ. ಚಲದ ಮಾತನ್ನುಳಿದು
ಕುಲದ ಮಾತನ್ನೆತ್ತಿ ಕೌರವನಿಗಾಕುಲವ
ತಂದೊಡ್ಡುತಿಹನೇನೊ ಅದು ಕೂಡ ತಿಳಿಯದಿದೆ.

ಸ್ವಾಮಿಭಕ್ತನು ಕರ್ಣ ! ರಾಜನಿಷ್ಠನು ಕರ್ಣ !
ಕೌರವನ ಜೀವಾಳವಾಗಿ ಬದುಕುವ ಕರ್ಣ !
ಕುರುಪತಿಯೊಳಪದೆಶೆಯ ನೆಸಗಿ ಬಾಳುವನಲ್ಲ.
ಸ್ವಾಮಿ ಕಾರ್ಯದೊಳವನು ಕದನ ಕಂಠೀರವನು !
ಅನ್ನದಾತನಿಗಾಗಿ ಪ್ರಾಣವನೆ ಪಣಕಿಡುವ
ಘೋರ ಸಾಹಸಿಯವನು. ಉಂಡ ಮನೆಯೊಳಗೆರಡು
ಬಗೆವ ಭಂಡನೆಂದಿಗು ಅಲ್ಲ. ವ್ಯರ್ಥ ಭಯದೊಳ
ಗಾನು ಸುಮ್ಮನೇ ಬೇಯುತಿಹೆನೆಂದರಿತು ನಿಂತರೂ
ಕರ್ಣನೆದೆಯೊಳಗೆದ್ದ ಹೊಯ್ದಾಟದುರಿಯನ್ನು
ಪ್ರತ್ಯಕ್ಷ ಕಾಣುತಿಹೆ. ಶಾಂತವಾಗಲಿ ತಾಯಿ !
ಕರ್ಣನೆದೆಯೊಳಗೆದ್ದ ಕೀಳು ಭಾವಗಳೆಲ್ಲ
ದಹಿಸಿ ಹೋಗಲಿ ದೇವಿ ! ಭಾಗ್ಯ ಭಾಸ್ಕರ ದೇವ !
ಕರ್ಣನಿಗೆ ನೆರವಾಗು ! ಜಗದ ಕೊಳೆಯನು ಸುಡುವ
ನಿನ್ನ ತೇಜೋರಾಸಿ ರಾಧೇಯನೊಳು ಬಂದ
ಕಸರು ದಹಿಸಲಿ ತಂದೆ ! ನಿನಗೆನ್ನ ಭಿಕ್ಷೆಯಿದು
ದಕ್ಷವಾಗಿರು ತಂದೆ ! !

( ಎರಡೂ ಕೈಗಳನ್ನು ಜೋಡಿಸಿ ಬಾಗಿ ನಮಿಸುತ್ತಿರಲು )

— ತೆರೆ —

## ದೃಶ್ಯ ಮೂರು

[ ಭಾಗೀರಥೀ ತಟಾಕ. ಶುಭ್ರವಸ್ತ್ರಾಂಕಿತನಾದ ರಾಧೇಯನು ಮೆಲ್ಲಮೆಲ್ಲನೆ ಪ್ರವೇಶಿಸುತ್ತಾನೆ. ಕದಡಿ ಕಂಗೆಟ್ಟಿರುವ ಮುಖದಲ್ಲಿ ಉದ್ವಿಗ್ನತೆಯು ತಾಂಡವ ವಾಡುತ್ತಿದೆ. ಹೃದಯದಲ್ಲಿದ್ದ ಭಾವಗಳ ತಾಕಲಾಟವನ್ನು ಸೂಚಿಸುವಂತೆ ನಿಟ್ಟುಸಿರು ತಿದಿಯಂತೆ ಹೊರಹೊಮ್ಮುತ್ತಿದೆ. ಸುತ್ತಲಿನ ಪ್ರಶಾಂತ ನಿಸರ್ಗವನ್ನೊಮ್ಮೆ ಅವನು ಕಣ್ಣು ತುಂಬಾ ನೋಡಿದಾಗ ಕಣ್ಣು ಹಸಿಗೂಡುತ್ತವೆ. ಆ ಸೌಂದರ್ಯಸೃಷ್ಟಿಗವನು ಕೈಜೋಡಿಸುತ್ತ ]

ರಾಧೇಯ— ಈ ವನದ ಮಧ್ಯದಲಿ ಸಂಪನ್ನ ಶಾಂತಿಯಲಿ
ದಿನ ಬೆಳಗು ಬಾಳುತಿಹ ದೇವ ದೇವತೆಗಳಿರ !
ಬಾಳಭೂಕಂಪದೊಳು ಸಿಡಿದೆದ್ದ ಕಿಡಿಗಳಿಗೆ
ಕರ್ಣನೆದೆಯೇ ಸುಟ್ಟು ಕರಕಾಗಿ ನಿಂತಿಹುದು.
ಹರಿಯು ಕದಡಿದ ಶಾಂತಿ ಹಾಹಾರಿ ನಿಂತಂತೆ
ತಳವನೇ ಕಿತ್ತಿಹುದು. ಶಾಂತಿ ಭಿಕ್ಷೆಯ ನೀಡಿ
ನೀವೆನ್ನ ರಕ್ಷಿಸಿರಿ ದೇವ ದೇವತೆಗಳಿರ !
ಮೂಡಣದೊಳೀಗಲೇ ಮೂಡಿ ಬರುತಿಹರವಿಯೆ !
ಕೆಂಗಣ್ಣ ತೋರದಿರು. ನಿನ್ನ ಪುಣ್ಯೋದಯದ
ಪುಣ್ಯ ಕಾಲದೊಳೆನ್ನ ಹೃದಯ ತುಂಬಲಿ ಸ್ವಾಮಿ !
ನಿನ್ನ ಕರುಣಾಬಲದ ದಿವ್ಯ ದೃಷ್ಟಿಯೊಳೆನಗೆ
ಶಾಂತಿ ಲಭಿಸಲಿ ತಂದೆ ! ವನದ ಮಧ್ಯದೊಳೆನ್ನ
ಭಾಗ್ಯವೇ ತೆರೆದಂತೆ ಪರ್ವಕಾಲದೊಳೆನ್ನ
ಪುಣ್ಯವೇ ಬಂದಂತೆ ಮನದ ಕೋಲಾಹಲವ
ಮೆಟ್ಟಿ ನಿಲ್ಲುವ ಶಾಂತಿ ಭದ್ರವಾಗಲಿ ತಂದೆ !

[ ಎನ್ನುತ್ತ ಕೈಜೋಡಿಸಿ ಭಾಗೀರಥಿಯ ಪುಣ್ಯಜಲವನ್ನು ಬೊಗಸೆಯಲ್ಲಿ ತೆಗೆದು ಕೊಳ್ಳುವ ಹೊತ್ತಿಗೆ ದೂರದಲ್ಲಿ ಸದ್ದಾದ ಅರಿವಾಗಲು ಹಿಂದೆ ನೋಡುವಷ್ಟರಲ್ಲಿ ಆಕೃತಿಯೊಂದು ಅಂಜಿಕೆಯಲ್ಲಿ ಮೆಲ್ಲನೆ ಬರುವಂತೆ ಕಾಣುವದು. ಬೊಗಸೆಯ ನೀರನ್ನು ಚೆಲ್ಲಿ ರಾಧೇಯನು ಎದ್ದು ನಿಲ್ಲಲು ಅವಳು ಅವನನ್ನು ಕಾಣಲಾರದೆ ಮರೆಯಾಗುವಳು. ಇದನ್ನು ಸ್ಪಷ್ಟವಾಗಿ ನೋಡಿದ ರಾಧೇಯನು ಉಚ್ಚಸ್ವರದಲ್ಲಿ ]

ಹಿಂದು ಹಿಂದಕೆ ಸರಿದು ಮರೆಯಾಗಿ ನಿಲ್ಲುತಿಹ
ಅಂಜಿಕೆಯ ತೊರೆದೊಮ್ಮೆ ಮುಂಬರಿದು ಬಾ ತಾಯಿ !
ನಿನಗೆನ್ನ ಅಭಯವಿದೆ. ಬೆದರದಿರು, ಬೆಚ್ಚದಿರು.
[ ದೂರದಲ್ಲಿ ಆಕೃತಿಯು ಕ್ಷೀಣಸ್ವರದಲ್ಲಿ ದನಿ ನಡುಗಿಸುತ್ತ ]

**ಆಕೃತಿ**— ಅಭಯವಿತ್ತರೆ ಬಂದು ಕಾಣುವೆನು ಕಂದಯ್ಯ !
( ಎಂದು ನುಡಿಯುವದು )

**ರಾಧೇಯ**— ರಾಧೇಯನೆಂದಿಗೂ ಕವಡು ನುಡಿಯುವದಿಲ್ಲ.
ಹೀಗೆ ಬಾ ತಾಯಮ್ಮ. ನಿನಗೆನ್ನ ವಚನವಿದೆ.

[ ಆಕೃತಿಯು ಮೆಲ್ಲನೆ ಮುಂದೆ ಸರಿಯುವದು. ಆ ಮುಖದಲ್ಲಿ ಅದಾವುದೋ ವ್ಯಸನ ಮೂಡಿದಂತೆ ಮುಖದ ಬಣ್ಣ ಕೆಟ್ಟು ಹೋಗಿರುವದು. ಧೈರ್ಯದಿಂದ ಮುಖವನ್ನು ಮೇಲೆತ್ತಲಾರದ ಸಂಕಟದಲ್ಲ ಅವಳು ಅವನತ ಮುಖಳಾಗಿ ರಾಧೇಯನೆದುರಿಗೆ ಬಂದು ನಿಲ್ಲುವಳು. ದೇಹದಲ್ಲಿ ನಡುಕ. ಇವಳೇ ಕುಂತೀದೇವಿ. ಇವಳ ಈ ಅವಸ್ಥೆಯನ್ನು ನೋಡಿದ ರಾಧೇಯನು ಕಾತರ ಭಾವದಿಂದ ]

ನೀನಾರು ತಾಯಿ ? ನೀನಾರು ಹೇಳಮ್ಮ !
ಗಾಳಿಗೊಡ್ಡಿದ ಸೊಡರು ಕಂಪಿಸುವ ತೆರದಿಂದೆ
ಗಡಗಡನೆ ನಡುಗುತಿಹ ಮಾತಾವುದಿದೆ ಹೇಳು.
ನಿನ್ನ ಮಗನಂತಿರುವ ರಾಧೇಯನೆದುರಿನಲಿ
ಮುಚ್ಚುಮರೆಯೇ ಬೇಡ, ಹೇಳಮ್ಮ. ನೀನಾರು ?

**ಕುಂತೀದೇವಿ**— ( ರಾಧೇಯನನ್ನು ಕಣ್ಣೆತ್ತಿ ನೋಡಲಾರದ ಕಳವಳದಲ್ಲಿ )
ನೀನೆನ್ನ ಮಗನೆಂದು . . . .ಮಗನೆಂದು. . . .

**ರಾಧೇಯ**— (ಸಂತಯಿಸುತ್ತ) ಮಗನಕಿಂತಲು ಮಿಗಿಲು
ಹೆದರದಿರು ತಾಯಿ !

**ಕುಂತೀದೇವಿ**— (ಕಣ್ಣೀರುದುಂಬಿ) ತಾಯಿ ! ತಾಯಿ ! !
ನಾನಿನ್ನ ತಾಯೆಂಬ ಗುರುತು ಸಿಕ್ಕಿತೆ ಕಂದ !

**ರಾಧೇಯ**— (ಗಡಬಡಿಸಿ) ನೀನೆನ್ನ ತಾಯಮ್ಮ ?

**ಕುಂತೀದೇವಿ**— (ಅವನತ ಮುಖಳಾಗಿ) ಮಾತು ಸತ್ಯವು ಕಂದ.

ರಾಧೇಯ— (ಶಂಕಿತನಾಗಿ) ಜೀವಮಾನದೊಳೆನ್ನನೆಂದಿಗೂ ಕಾಣದಿಹ - -

ಕುಂತೀದೇವಿ— ( ಮುಖ ಮೇಲೆತ್ತಿ ) ತಾಯಿಯೇ ನಾ ಕಂದ !

ರಾಧೇಯ— ( ನೊಂದ ದನಿಯಲ್ಲಿ ) ತಾಯಿಯಾದವಳೆನ್ನ
ಜಲಸಮಾಧಿಯೊಳಂದು ಮಗನ ಕೊಂದಿಹಳಮ್ಮ.
ಕರುಳಕೊಲೆಗೊಂಡವಳು ತಾಯಿಯಾಗಲು ಬಹುದೆ ?
ಮೇಣವಳು ಮತ್ತೊಮ್ಮೆ ಮಗನ ಕಾಣಲು ಬಹುದೆ ?

ಕುಂತೀದೇವಿ— (ಗದ್ಗದಿತಳಾಗಿ)
ಜೀವನದ ಕತೆಯಿದುವು. ಕೊಲೆಗೊಂಡ ಕತೆಯಲ್ಲ.
ವಿಧಿಯ ಸಂಕೇತವದು. ನಂಬುವದು ನನ್ನಯ್ಯ !
ಕೊಡಗೂಸು ತಾಯಾಗಿ ತಾಯಿತನವರಿವಿನೊಳು
ತಾಯಾಗಿ ಬಾಳಿದಳು. ಮಗನ ಶ್ರೇಯಕ್ಕಾಗಿ
ಕಲ್ಲೆದೆಯ ಮಾಡಿದಳು. ತಾಯಿ ಗಂಗೆಯ ನೆನೆದು
ಸಲುಹೆಂದು ಹೇಳಿದಳು. ಪಾಪಾತ್ಮಳವಳಲ್ಲ,
ಭಾನುಮಂಡಲದಲ್ಲಿ ರಾರಾಜಿಸುತ್ತಿರುವ
ಭಾಗ್ಯಭಾಸ್ಕರನಿದಕೆ ಸಾಕ್ಷಿಯಾಗಿಹನಯ್ಯ !
ತಾಯಿ ನಿರ್ದಯಳೆಂದು ತಿಳಿಯದಿರು ಕಂದಯ್ಯ

ರಾಧೇಯ— ( ಕೆಣಕುವ ಕಣ್ಣುಗಳಿಂದ ನೋಡುತ್ತ ) ಅಂದೆನ್ನ ಗೌರವವ
ಕಾಪಿಟ್ಟ ತಾಯ್ಗರಳು ಮುಂದದುವು ಮಣ್ಣುಪಾ
ಲಾಗಿಹುದ ಕಣ್ಣಾರೆ ಕಂಡರೂ, ಹೀನಕುಲ
ದವನೆಂದು ಜಗ ಕೂಗಿ ಕರೆದರೂ, ಕಣ್ಮುಚ್ಚಿ
ಕೊಂಡೇಕೆ ಕುಳಿತುಕೊಂಡಿರಿ ತಾಯಿ! ಇವನೆನ್ನ
ಮಗನೆಂದು ಸಾರಲಾರದ ನೀವು ಮಗನ ಜೀ
ವಿತವನ್ನು ಕಂಗೆಡಿಸಿ ನಿಂತಿಹಿರಿ. ಮತ್ತೀಗ
ಬಂದೆನ್ನ ಮಗನೆಂದು ಅಪ್ಪುವಿರಿ. ದೀರ್ಘಕಾ
ಲದ ವರೆಗೆ ಮರೆತ ಮಗನಿಗೆ ಮತ್ತೆ ತಾಯಾಗಿ

ಬಾಳುವಿರಿ. ತಾಯಿತನಕೀ ಮಾತು ಲಕ್ಷಣವೆ?
ಶೋಭಾಯಮಾನವೇ? ಕರುಳ ಬಿಸುಟದ ತಾಯಿ - - -

ಕುಂತೀದೇವಿ— (ಮಾತನಾಡಗೊಡದೆ ಕಳವಳದ ದನಿಯಲ್ಲಿ)
ನಾ ನಿನ್ನ ಬಿಸುಟಿದೆನೆ?
ನಿನ್ನ ದೂರದ ಮಾತು ಸಾಮೀಪ್ಯವಾಗಿತ್ತು;
ಎನ್ನಂತರಂಗವೇ ನಿನಗಾಗಿ ಕಾದಿತ್ತು.

ರಾಧೇಯ— (ನಿರ್ದಯನಂತೆ) ತಾಯಿತನದೊಳು ನಿನ್ನ ಸ್ವಾರ್ಥವೇ ತುಂಬಿತ್ತು
ಇಬ್ಬಗೆಯ ಸ್ವಾರ್ಥವದು. ಸುರನದಿಯೊಳೆಸೆದದ್ದು;
ಮುಂದೆ ಕಡೆಗಣಿಸಿದ್ದು.

ಕುಂತಿದೇವಿ— (ಹಟದಿಂದ) ಮಗನ ಗೌರವಕಾಗಿ
ಸ್ವಾರ್ಥವೇ ಬೇಕಿತ್ತು.

ರಾಧೇಯ— (ನಿಷ್ಕರುಣದಿಂದ) ಜೀವಕೊಲೆಗೊಂಡವರು
ಕರುಣೆಗಳು ತಾಯಮ್ಮ! ನಾನವರ ಕ್ಷಮಿಸೇನು.
ಬಾಳ ಕೊಲೆಗೆಯ್ದವರ ಪಾಪಕ್ಷಾಲನೆಗಾಗಿ
ದೇವ ನೆರವೇ ಬೇಕು.

ಕುಂತೀದೇವಿ— (ಪೆಟ್ಟು ತಿಂದವಳಂತೆ) ಬಾಳಕೊಲೆಗೆಯ್ದಿರುವ
ಪಾಪಾತ್ಮರವರಾರು? ಹೇಳಬಹುದೇ ಕಂದ!

ರಾಧೇಯ— (ಬಿರುಸಾಗಿ) ಆ ಕೊಲೆಗೆ ತುತ್ತಾಗಿ ಸಾವಿನಲಿ ಬದುಕೆಳೆವ
ಸೂತ ಪುತ್ರನಿಗಿಂತ ತಾಯಿ ಗಂಗೆಯ ಕೇಳು.
ಮೂಡಣದಿಂದ ಬೆಳಗುತಿಹ ಸೂರ್ಯದೇವನ ಕೇಳು.
ಶುದ್ಧ ಸಾತ್ವಿಕವಾದ ತಾಯಿಹೃದಯವ ಕೇಳು.
ರಾಧೇಯನೆಂದಿಗೂ ಕೇಡು ನುಡಿಯುವದಿಲ್ಲ.

ಕುಂತೀದೇವಿ— (ಕಣ್ಣೀರನ್ನುದುರಿಸುತ್ತ)
ವಿಧಿಯು ಕೈಸವರಿರುವ ವಿಧಿವಿಲಾಸವ ನೆನೆದು
ತಾಯನೇ ಹಳಿಯದಿರು! ನಿನ್ನ ತಾಯಾದವಳು

ದೈವಹತಳಾಗಿಹಳು. ಬನ್ನಗಳನುಂಡುಂಡು
ಬೆಂದು ಹೋಗಿಹಳವಳು. ಜರ್ಜರಿತಳಾಗಿಹಳು. ( ಬಿಕ್ಕಳಿಸುವಳು )

**ರಾಧೇಯ**— ( ಕರಗಿ ) ರಾಧೇಯನಾದವನು ಮಾತೃವತ್ಸಲನಮ್ಮ.
ಕಣ್ಣೀರ ಸುರಿಸದಿರು. ಈಗ ಬಂದಿಹುದೇನು
ಯಾವ ಕಾರ್ಯವು ತಾಯಿ ?

**ಕುಂತೀದೇವಿ**— ( ಗಾಂಭೀರ್ಯದಿಂದ ) ಸೋದರರ ಕರುಬದೊಳು
ನಾಡು ಸಿಡಿದೆದ್ದಿರಲು ನಾಡ ಶಾಂತಿಯ ಹೊಣೆಯು
ನಿನ್ನದಿದೆ ಕಂದಯ್ಯ !

**ರಾಧೇಯ**— ಆ ಶಾಂತಿಗಾಗಿಯೇ ಯುದ್ಧಘೋಷಣೆಯಮ್ಮ!
ಸಾಹಸದ ಯುದ್ಧವೇ ಶಾಂತಿಯನು ತರಬಹುದು.

**ಕುಂತೀದೇವಿ**— ಹಿಂಸೆ ಸಾಹಸವಲ್ಲ; ಕೊಳಗುಳದೊಳೆಂದಿಗೂ
ಶಾಂತಿ ಮೂಡುವದಿಲ್ಲ.

**ರಾಧೇಯ**— ( ನಿರ್ಧಾರದಿಂದ ) ಶಕ್ತಿವಂತರು ಇದನು
ನಂಬಿ ನಿಲ್ಲುವದಿಲ್ಲ. ಯುದ್ಧವಿಲ್ಲದ ಶಾಂತಿ
ಬರಿ ಭ್ರಾಂತಿ ತಾಯಮ್ಮ! ಶಾಶ್ವತದ ಶಾಂತತೆಗೆ
ಯುದ್ಧವೇ ಬೇಕಮ್ಮ !

**ಕುಂತೀದೇವಿ**— ಬೇರೊಂದು ಮಾರ್ಗದಲಿ
ಶಾಂತಿ ದೊರೆಕೊಂಬಾಗ ತೋಳತಿಂಡಿಗೆ ಮಾತ್ರ
ಬವರಕನುವಾಗುವದು ಕ್ಷಾತ್ರವೃತ್ತಿಗೆ ಕೇಡು.

**ರಾಧೇಯ**— ( ಮಾತು ಮುಗಿಸಬೇಕೆಂದು )
ಮತ್ತಾವ ದಾರಿಯಿದೆ ಹೇಳಬಹುದೇ ತಾಯಿ ?

**ಕುಂತೀದೇವಿ**— ( ಅಂಜುತ್ತ ) ಶಾಂತಿ ಸಂಸ್ಥಾಪನೆಯ ಹೆದ್ದಾರಿ ನೀನಯ್ಯ ?

**ರಾಧೇಯ**— ಸ್ವಾಮಿ ಭಕ್ತನ ಕಾರ್ಯ ಧರ್ಮಯುದ್ಧದೊಳಿರಲು
ನಾನಾವ ಶಾಂತಿಯನು ತರಬಲ್ಲೆ ಹೇಳಮ್ಮ !

**ಕುಂತೀದೇವಿ**— ಸೋದರರ ಕೊಲ್ಲುವುದು ಧರ್ಮಯುದ್ಧವೆ ಕಂದ ?

ಹಿರಿಯ ಸೋದರನಾಗಿ ನೀನೆನ್ನ ಸಂಗಾತ
ಬರುವಿಯಾದರೆ ನೋಡು ವಿಶ್ವಶಾಂತಿಯ ಬೀಜ
ಕಳೆದುಂಬಿ ನಿಲ್ಲುವುದು.

ರಾಧೇಯ— ( ಶಂಕಿತನಾಗಿ, ಕಣ್ಣರಿಸಿ ನೋಡುತ್ತ ) ನನ್ನ ಜೀವನದಲ್ಲಿ
ತನ್ನ ಜೀವನ ಬೆರೆಸಿ ನನ್ನನೇ ತಾನೆಂದು
ತಿಳಿದಿರುವ ಕೌರವನ ಬೆನ್ನಿನೊಳಗಿರಿಯೆಂದು
ಬೋಧಿಸುವ ತಾಯಮ್ಮ! ಕ್ಷಾತ್ರಕುವರರಿಗೆಂತು
ಮೊಲೆಯನೂಡಿದೆಯಮ್ಮ! ಸ್ವಾಮಿ ಕಾರ್ಯದೊಳೆನ್ನ
ಮೀಸಲಾಗಿಹ ಜೀವ ಸಿಡಿದು ಬಿದ್ದರು ಸರಿಯೆ
ರೂಢಿಮೆಚ್ಚದ ಮಾತನೆಸಗಲಾರೆನು ತಾಯಿ!

ಕುಂತೀದೇವಿ— ವೀರ ಕರ್ಣನ ಪಡೆದ ವೀರವನಿತೆಯು ಕುಂತಿ
ಕ್ಷಾತ್ರ ಜೀವನವನ್ನು ಬಲ್ಲವಳು ಕಂದಯ್ಯ!
ಕೌರವನು ಸ್ವಾಮಿಯೇ? ನೀನವನ ಸೇವಕನೆ?
ಕೌರವನ ಪಟ್ಟವೇ ನಿನ್ನದಾಗಿರುವಾಗ
ನೀನವನ ಆಳಾಗಿ ಬಾಳುತಿಹ ದುರ್ದಸೆಯ
ನಾವ ಮಾತೆಯು ಸಹಿಸಿ ಕಂಗೆಟ್ಟು ನಿಂತಾಳು?
ನಾಡ ಹಿರಿಯನು ನೀನು. ಸಾರ್ವಭೌಮನು ನೀನು!
ಪಾಂಡು ಪುತ್ರರ ಹಿರಿಯ ಸೋದರನು ನೀನಯ್ಯ!
ನಿನಗೆನ್ನ ಕೊರಳಾಣೆ, ನನ್ನೊಡನೆ ಬಾರಯ್ಯ!

ರಾಧೇಯ— ( ಕಳವಳದಿಂದ ) ಒಳಿತೆನ್ನು ತಾಯಮ್ಮ!
( ಗಂಭೀರನಾಗಿ ) ಶತಕೋಟಿ ನಾಡುಗಳ
ಗೊಡೆತನವನಿತ್ತರೂ ಕೌರವನ ಕಡೆಗಣಿಸಿ
ನಿಲ್ಲಲಾರೆನು ತಾಯಿ! ನೀನೆನ್ನ ಕೆಣಕದಿರು.

ಕುಂತೀದೇವಿ— ನೀನಿಂತು ನುಡಿಯುವೊಡೆ ಸೋದರರ ಗತಿಯೇನು?

ರಾಧೇಯ— ಸ್ವಾಮಿ ಭಕ್ತನು ಕರ್ಣ ಸ್ವಾಮಿಯನೆ ನಂಬುವನು.

ಕುಂತೀದೇವಿ— ಮಾತೃವತ್ಸಲನಾಗಿ ಸೋದರರ ಕಾಯನೇ ?

ರಾಧೇಯ— ( ಸಂಕಟದಿಂದ ) ಹಗೆಯ ತಲೆ ಕಾದವನು
ಸ್ವಾಮಿದ್ರೋಹನು ತಾಯಿ !

ಕುಂತೀದೇವಿ ( ಉಗುಳುನುಂಗುತ್ತ ) ಸೋದರರು ಹಗೆಗಳೇ ?

ರಾಧೇಯ— ನೀನೆನ್ನ ಬಗೆಗದಡಿ ನಿಲ್ಲದಿರು ತಾಯಮ್ಮ !
ಕೌರವನಿಗಪದೆಸೆಯ ಕನಸಿನಲ್ಲಿಯು ಕೂಡ
ಬಯಸಲಾರೆನು ದೇವಿ !

ಕುಂತೀದೇವಿ— ( ಮತ್ತೆ ) ನಿನ್ನನೇ ನಂಬಿರುವ ಸೋದರರ ಗತಿಯೇನು. ?

ರಾಧೇಯ— ( ಆದೇಶನಿಯುಲ್ಲಿ )ನನ್ನನೇ ನಂಬಿರುವ ಕೌರವನ ಗತಿಯೇನು ?

ಕುಂತೀದೇವಿ— ( ನಿರಾಶೆಯಿಂದ ) ನೀನೆನ್ನ ಸಂಗಾತ........

ರಾಧೇಯ—( ದೃಢವಾಗಿ ) ಬರಲಾರೆ ತಾಯಮ್ಮ !

ಕುಂತೀದೇವಿ— (ಧೈರ್ಯಗೆಟ್ಟು) ಖಂಡಿತವೆ ಈ ಮಾತು ?

ರಾಧೇಯ— ದೃಢತೆಯನ್ನೆಂದಿಗೂ ಕರ್ಣನೀಡಾಡಿಲ್ಲ.
ಮೂಡಣದಿ ಮೂಡುತಿಹ ತಾತ ಸೂರ್ಯನು ಮರೆತು
ಪಡುವಣದಿ ಬಂದ ದಿನ, ಗರಗರನೆ ತಿರುಗುತಿಹ
ತಾಯಿ ಪೃಥ್ವಿಯ ಚಲನೆ ಗಕ್ಕನೇ ನಿಂತ ದಿನ,
ಹಗಲು ಇರುಳಾದ ದಿನ, ಇರುಳು ಹಗಲಾದ ದಿನ
ವೀರ ಕರ್ಣನು ತನ್ನ ಸ್ವಾಮಿಯನು ಕಡೆಗಣಿಸಿ
ಬಿಟ್ಟು ಬರಬಹುದಮ್ಮ.

ಕುಂತೀದೇವಿ— (ಕಣ್ಣೀರನ್ನು ತಂಬಿಕೊಂಡು) ವಿಧಿಯಿತ್ತ ಶಿಕ್ಷೆಯಿದು
ಬಹು ಘೋರವಾಗಿಹುದು

ರಾಧೇಯ— ( ವ್ಯಂಗ್ಯವಾಗಿ ) ಕರ್ಮಫಲವಿದು ತಾಯಿ
ವಿಧಿಯು ಕುರುಡಾಗಿಲ್ಲ.

ಕುಂತೀದೇವಿ— ನನಗಾವ ದಾರಿಯಿದೆ ಹೇಳಬಹುದೇ ಕಂದ !

ಮಾತನರಿತರು ಕೂಡ ದೊರೆಯನೇ ನಂಬುವುದು
ಮಗನ ಲಕ್ಷಣವಲ್ಲ. ನೀನೆನ್ನ ಮಗುವಾಗಿ

**ರಾಧೇಯ**— (ತಡೆದು) ಪುಣ್ಯವಂತರು ನೀವು ದಾರಿಸಾಗಿರಿ ತಾಯಿ
ಪಾಪಾತ್ಮನಾದವನು ಈ ಕರ್ಣನೊಬ್ಬನೇ!
ಹೋಗಿ ಬನ್ನಿರಿ ತಾಯಿ!

**ಕುಂತೀದೇವಿ**— ಮಾತೃವತ್ಸಲನಾಗಿ........

**ರಾಧೇಯ**— ನಿನಗೆನ್ನ ಅಭಯವಿದೆ ನಾನಿತ್ತ ವಚನವಿದೆ
ಬರುವ ಮಾತನ್ನುಳಿದು ಏನು ಬೇಕದು ಕೇಳು
ಸಲ್ಲಿಸುವೆ ತಾಯಮ್ಮ!

**ಕುಂತೀದೇವಿ**—(ಮನಸ್ಸು ಗಟ್ಟಿ ಮಾಡಿ) ವೀರರೈವರ ಪ್ರಾಣ
ರಕ್ಷಣೆಯ ವಚನವನು............

**ರಾಧೇಯ**— ಬೇಡ ಬಂದಿಹ ತಾಯಿ!
ಜಗದಿ ತಾಯ್ತನವೆನಿತು ಕ್ರೂರವಾಗಿಹುದಮ್ಮ!

**ಕುಂತೀದೇವಿ**-- ಕಂದಯ್ಯ! ಕಂದಯ್ಯ!

**ರಾಧೇಯ**— (ತ್ಯಾಗಿಯಂತೆ) ನಿನ್ನ ಕಂದರ ಸಲುಹಿ ಕೃತಕೃತ್ಯಳಾಗಮ್ಮ!
ಸುಖಿಯಾಗು ಹೋಗಮ್ಮ! ವಚನ ಬದ್ಧನು ಕರ್ಣ
ವಚನದಂತೆಸಗುವನು.

**(ಕುಂತೀದೇವಿಯು ಸಾವಕಾಶವಾಗಿ ಸರಿದು ಹೋಗುವಳು. ಅವಳು ಹೋದ ಸಿಟ್ಟನೇ ನೋಡುತ್ತಲಿದ್ದ ರಾಧೇಯನು ಅವಳು ಮರೆಯಾದ ಕೂಡಲೇ ಘೋರವಾದ ನಿಟ್ಟುಸಿರನ್ನೆಳೆದು)**

ಜೀವಮಾನದೊಳೆಂದು ಕಣ್ಣೆತ್ತಿ ನೋಡದಿಹ
ಶ್ರೀಹರಿಯು ಬಂದೆನ್ನ ಸಂಗತಿಯನರುಹಿದೊಡೆ
ಹರಿಗೆ ವಚನವನಿತ್ತೆ. ತಾಯಿ ಕುಂತಿಗೆ ನನ್ನ

ಆತ್ಮವನೆ ಬಲಿಕೊಟ್ಟೆ. ಬದುಕಿನರ್ಥವಿದೇನು?
ಕಾಳಗದ ಕತೆಯೇನು? ಕುರುಪತಿಯ ಗತಿಯೆನಿತು
ಘೋರವಾಗಿಹುದಯ್ಯೊ! ನನ್ನಭಯಕವಚದಲಿ
ಕಾಳಗವ ಹೂಡಿದನು. ಹಿರಿಯರನು ಕಡೆಗಣಿಸಿ
ಪಾಂಡವರ ಕೆಣಕಿದನು. ನಾನಿತ್ತ ವಚನವನು
ಕಾಪಾಡಿ ಕೆಡಬೇಕೆ? ಕೊಟ್ಟ ಮಾತನು ತಪ್ಪಿ
ಜೀವನದ ಖ್ಯಾತಿಯನು ನಾನಾಗಿ ಸುಡಬೇಕೆ?
ಏನೆನ್ನ ಬಾಳಿದುವು!

[ದಿಗ್ಭ್ರಾಂತನಾದವನಂತೆ ಹುಚ್ಚು ಹೆಜ್ಜೆಗಳನ್ನಿಡುತ್ತ ಕೂದಲುಗಳನ್ನು ಜಗ್ಗಿಕೊಳ್ಳುವ ಹೊತ್ತಿಗೆ ದೂರದಲ್ಲಿ ಅನೇಕ ಮುಖಗಳಿಂದ "ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್" ಎಂಬ ಗಂಭೀರ ದನಿಯು ವಾತಾವರಣವನ್ನು ತುಂಬತೊಡಗುವದು. ಅದನ್ನು ಕೇಳಿದ ರಾಧೇಯನು ಪುಳುಕಿತನಾಗಿ ಧಾವಿಸಿ ಹೋಗಿ ಬೊಗಸೆಯಲ್ಲಿ ಗಂಗೋದಕವನ್ನು ತೆಗೆದುಕೊಂಡು.]

ಜಗವ ಧೀಮಂತತೆಗೆ
ತಿಳಿಬೆಳಗನೀಯುತಿಹ ಬೆಳಕಿನೊಡೆಯನೆ ದೇವ!
ನಿನಗೀವ ಅರ್ಘ್ಯವಿದು ಮಗನ ಕಾಣಿಕೆಯಯ್ಯ!
ಸಂಚು ಹೂಡಿದ ವಿಧಿಯು ಕಾಳಪಸ್ತದೊಳೆನ್ನ
ಹೃದಯವೇ ಚೂರಾಗಿ ಮುರಿದು ಬೀಳುವ ಮುನ್ನ
ನೀನೆನ್ನ ನೆರವಾಗಿ ಕಾಪಾಡು ತಂದೆಯೇ!
ಜೀವನದ ಭವ್ಯತೆಯು ಮಣ್ಣು ಪಾಲಾದಾಗ
ಸಿಡಿದೆದ್ದ ಭಾವಗಳು ಮನವ ಕಂಗೆಡಿಸಿರಲು
ದೇದೀಪ್ಯಮಾನದೊಳು ತೊಳಗಿ ಬೆಳಗುತಲಿರುವ
ದಿವ್ಯಭಾವದೊಳೆನ್ನ ಹೃದಯವನು ಮಿಡಿಯಯ್ಯ!
ನಿನ್ನ ಕಿರಣಗಳೆಲ್ಲ ಕಾವ ಕಣ್ಣುಗಳಾಗಿ
ಕರ್ಣನೆದೆಯೊಳಗೆದ್ದ ಕೊಳೆಯ ತೊಳೆಯಲಿ ತಂದೆ!
ಈ ಬಾಳು ನಿನ್ನದಿದೆ! ನಿನ್ನ ದಯೆಯೇ ಮೋಕ್ಷ!
ನಿನ್ನ ಕೃಪೆಯೇ ಕರುಣೆ!

[ ರಾಧೇಯನು ಬೊಗಸೆಯೊಳಗಿನ ನೀರನ್ನು ಸೂರ್ಯದೇವನಿಗೆ ಅರ್ಪಿಸುತ್ತಿರುವಾಗ ಎಲ್ಲ ಕಡೆಯಿಂದಲೂ "ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್" ಎಂಬ ದನಿಯು ಭೋರ್ಗರೆಯ ತೊಡಗಲು ಅವನೂ ಆ ದನಿಯಲ್ಲಿ ತನ್ನ ದನಿಯನ್ನು ಕೂಡಿಸುತ್ತಿರುವಾಗ]—

— ತೆರೆ —

## ದೃಶ್ಯ ನಾಲ್ಕು

[ ಸಂದು ಹೋದ ಕಾಲವನ್ನು ಸೂಚಿಸುವಂತೆ ರಂಗಸ್ಥಳದಲ್ಲೆಲ್ಲ ಕಾರ್ಗತ್ತಲೆ. ಕೆಲಸಮಯ ಕಳೆದ ಮೇಲೆ ಈ ಕತ್ತಲೆಯನ್ನು ಭೇದಿಸುವಂತೆ ಪಂಜಿನ ಬೆಳಕು ಕಾಣಿಸುತ್ತದೆ. ಆ ಬೆಳಕಿನ ಹಿಂದೆ ಅನೇಕ ವಿಕಟವಾದ ದನಿಗಳು ತೂರಿಬರುತ್ತವೆ. ಭವ್ಯವಾದ ಆಕೃತಿಯೊಂದು ಕೋರೆದಾಡೆಗಳನ್ನು ತೋರಿಸುತ್ತ ನುಗ್ಗಿ ನುಗ್ಗಿ ಬರತೊಡಗಿದೆ. ಧಕ್ಕೆಯು ಗತ್ತು ಅವಕ್ಕೆ ಸ್ಫೂರ್ತಿಯಾದಂತೆ ಕುಣಿಯುತ್ತ ಬಂದು ಕೂಗತೊಡಗುತ್ತವೆ. ]

ಬನ್ನಿರಿ ಶಕ್ತಿನಿ ಬನ್ನಿರಿ ಡಾಕಿನಿ
ಬನ್ನಿರಿ ನಿಮಗಿದೆ ಔತಣವು;
ಭಾರತ ಕೊಳಗುಳದೆಲ್ಲೆಡೆ ನೆತ್ತರ
ಹರಿ ಹರಿಯುತಲಿಹುದನುದಿನವು.

ಮರುಳುಗಳೆಲ್ಲರು ಬಳಗವ ತನ್ನಿರಿ
ಹಬ್ಬದೂಟವೇ ನಿಮಗಿಹುದು
ಬೆಂತರ ರಾಣಿಯರೆಲ್ಲರು ಬನ್ನಿರಿ
ನೆತ್ತರೂಟವೇ ಸವಿಯಿಹುದು

ಬನ್ನಿರಿ ಶಕ್ತಿನಿ ಬನ್ನಿರಿ ಡಾಕಿನಿ
ಬನ್ನಿರಿ ನಿಮಗಿಪೆ ಔತಣವು.

[ ಈ ಕೋರೆದಾಡೆಯು ಬಳಗವನ್ನು ಕರೆಯುವಂತೆ ಕೈಮಾಡಿ ಹೆಜ್ಜೆಯಿಕ್ಕುತ್ತಿರುವಾಗ ವಿರುದ್ಧ ದೆಶೆಯಿಂದ ಇನ್ನೊಂದು ಮರುಳು ಕಾಣಿಸಿಕೊಂಡು ]

ಗಜ ಘಟೆಗಳ ಕಹಿನೆತ್ತರ
ತುರಗಂಗಳ ಹಸಿನೆತ್ತರ
ತುಳಿಲಾಳ್ಗಳ ಬಡನೆತ್ತರ
ಕುಡಿ ಕುಡಿಯುತಲಿದೆ ಬಡವಾಗಿದೆ ಜಾಣೆ
ಪೆಣದಿನಿಗಳರಾಣಿ.

[ ಎನ್ನುತ್ತ ಕೋರೆದಾಡೆಯು ಎದುರಿಗೆ ದಿಗ್ಗದಿಗ್ಗನೆ ಹೋಗಿ ನಿಂತು ವಿಲಕ್ಷಣ ಹಾವಭಾವಗಳನ್ನು ತೋರುತ್ತ ]

ಭಟರೆದೆಯಡಗಿಗೆ ಸೋತಿಹ ನಾಲಗೆ
ಗೆಲ್ಲಿದೆ ಸವಿಸುಖ ಹೇಳುವಿಯಾ ಜಾಣೆ ?
ಪೆಣದಿನಿಗಳ ರಾಣಿ.

[ ಕುಣಿಯುತ್ತಿರುವ ಮರುಳನ್ನು ಸರಿಸುತ್ತ ಮುನ್ನುಗ್ಗಿ ಬಂದು ಕೋರೆದಾಡೆಯು]

ನೆತ್ತರವಿಲ್ಲಿದೆ ನೆತ್ತರವಲ್ಲಿದೆ
ನೆತ್ತರಮಯವೀ ಕೊಳಗುಳವು.
ಬಿತ್ತರವಾಗಿದೆ ಸುತ್ತಲು ಮುತ್ತಲು
ನೆತ್ತರಬೇಕೇ ನೆತ್ತರವು

( ಎಂದು ಮರುಳಿನ ಮೋರೆಯನ್ನು ತಿವಿಯುತ್ತಿರುವದನ್ನು ಪ್ರತಿಭಟಿಸುವಂತೆ ಈ ಮರುಳು ಸರ್ರನೆ ಹಾರಿ ಹಣೆಗಟ್ಟಿಸಿಕೊಳ್ಳುತ್ತ )

ಹಳಸಿದ ಹೆಣಗಳ ಬಳಿಕೆಯೊಳಿನ್ನಿದೆ
ಯೋಕರಿಸುತಲಿದೆ ಕಾರಿ;
ಹೇಸುತಲಿದೆ ಹೀರಿ.

[ಎಂದು ಚೀರಿ ಹೇಳುವ ಹೊತ್ತಿಗೆ ಮತ್ತೆ ಎರಡು ಮರುಳುಗಳು ಓಡಿಬರುವವು ಮೊದಲನೆಯ ಮರುಳು ಕೋರದಾಡೆಯನ್ನು ತಿವಿಯುತ್ತ ]

ಭಾರತ ವೀರರ ಸವಿ ಸವಿ ನೆತ್ತರ
ಪೆಲ್ಲಿದೆ ಬಿತ್ತರ ಹೇಳುವಿಯಾ ರಾಣಿ
ನೀನಲ್ಲಿಪೆಜಾಣೆ.

( ಎನ್ನುವ ಈ ಮರುಳನ್ನು ಹಿಂದೆ ಸರಿಸಿ ಎರಡನೆಯ ಮರುಳು. )

ಸಮರಾಂಗಣದೊಳಗೆಲ್ಲವು ತಂಗಳು
ತಿನ್ನಲಿಕೆಲ್ಲಿದೆ ಸವಿಕೂಳು
ವ್ಯರ್ಥವು ಈ ಬಾಳು. ( ಎನುತ್ತ ತೆರೆದ ಒಡಲನ್ನು ತೋರುವ ಹೊತ್ತಿಗ ಡಾಕಿಣಿಯೊಂದು ಸರ್ರನೆ ಬಂದು )

ಭೀಷ್ಮಾಚಾರ್ಯರ ನೆತ್ತರ ಕುಡಿಯುವೊಡೆ
ನೆತ್ತರ ಪೀಯುವೊಡೆ

( ಎಲ್ಲರೂ )

ಶರಶಯ್ಯಾಗತನಾಗಿಹನು
ಶರ ಪಂಜರದೊಳಗೊರಗಿಹನು.

( ಆ ಹೊತ್ತಿಗೆ ಇನ್ನೊಂದು ಮಗ್ಗಲಿಂದ ಬಂದ ಶಕ್ತಿನಿ ಹೌಹಾರಿದಂತೆ )

ದ್ರೋಣಾಚಾರ್ಯರ ನೆತ್ತರ ಕುಡಿಯುವೊಡೆ
ಎಲ್ಲರೂ ( ಹೌಹಾರಿದಂತೆ )
ದಗ ದಗ ಗಂಟಲು ಉರಿಯುತಿದೆ
ಒಡಲೊಳು ಬೆಂಕಿಯು ಬೀಳುತಿದೆ.

( ಎಂದು ವಿಲಕ್ಷಣ ಹಾವಭಾವಗಳೊಂದಿಗೆ ಒಡಲುಗಳನ್ನು ಬಡಿದುಕೊಳ್ಳುವಾಗ )

ಒಂದನೆಯ ಮರುಳು—

ಕುರುಯುವರಾಜನ ನೆತ್ತರ ಹೀಯುವೊಡೆ

ಎಲ್ಲರೂ— ( ನಿರಾಶೆಯಿಂದ )

ಹೀರ್ದನು ಕಲಿ ಭೀಮಾ !
ಹೀರ್ದನು ಕಲಿ ಭೀಮಾ !!

[ಎಂದು ನಿರಾಶಾಭಾವವನ್ನು ವ್ಯಕ್ತ ಮಾಡುವಹೊತ್ತಿಗೆ ಘುಂ—ಘುಂ - ಎಂಬ ಸಪ್ಪಳದೊಂದಿಗೆ ಭವಿಷ್ಯ ಸೂಚಿಯೆಂಬ ಮರುಳು ಅಟ್ಟಹಾಸದಿಂದ ಬರಲು ಎಲ್ಲರೂ ಆಪದದಿಂದ ಬರಮಾಡಿಕೊಂಡು ಸುತ್ತಲೂ ನೆರೆಯುವರು. ಭವಿಷ್ಯ ಸೂಚಿಯು ಎಲ್ಲರನ್ನೂ ನೋಡುತ್ತ ಖೊಳ್ಳೆಂದು ನಗಲು ಘುಂ—ಘುಂ—ವಾದ್ಯವು ಜೋರಿನಿಂದ ಮೊಳಗುವುದು. ಅದು ಶಾಂತವಾದವೇಳೆ ಭವಿಷ್ಯ ಸೂಚಿಯು ಹೆಜ್ಜೆ ಹಾಕತೊಡಗಲು ಘುಂ ಘುಂ—ಎಂಬ ಗತ್ತು ಪ್ರಾರಂಭವಾಗುವದು. ಆ ಗತ್ತಿನೊಂದಿಗೆ ಕುಣಿಯುತ್ತ ಭವಿಷ್ಯ ಸೂಚಿಯು—]

ಘುಮ್—ಘುಮ್ ಘುಮ್—ಘುಮ್—ಘುಂ
ಘುಂ—ಘುಂ—ಘುಂ........
ಕುರು ಮುತ್ತಾತನು........ಘುಮ್
ದ್ರೋಣಾಚಾರ್ಯನು........ಘುಮ್
ಕುರುಯುವ ರಾಜನು ಘುಮ್—ಘುಮ್—ಘುಂ ( ಎಂದು ವಿಲಕ್ಷಣವಾಗಿ ಹಸ್ತಗಳನ್ನು ತಿರುಗಿಸುತ್ತ ಸುತ್ತಿರುಗುವಾಗ ಕೋರೆದಾಡೆಯು:

ಘುಮ್—ಘುಮ್ ರಾಣಿಯೆ ಹೇಳುವಿಯೇನು
ಸತ್ತಿಹ ಕತೆಯನು ಸಾರುವಿಯೇನು ?

ಗಂಟೆಲು ಒಣಗಿದೆ ನೆತ್ತರು ಬೇಕು
ಹೊಸ ಹೊಸ ಬಂಟರ ಹಸಿವೆಗೆ ನೂಕು
ಸಮರಾಂಗಣದೊಳು ಸಂಭ್ರಮ ಬೇಕು
ಮುಕುಟ ಮಂಡಿತರು ಬೀಳಲು ಬೇಕು.

[ಆಣಕಿಸುತ್ತ] ಘುಮ್-ಘುಮ್-ಘುಮ್-ಘುಂ.

ಎಲ್ಲರೂ

ಘುಮ್-ಘುಮ್-ಘುಮ್-ಘುಂ.

[ಎಂದು ಎಲ್ಲ ಮರುಳುಗಳು ಭವಿಷ್ಯ ಸೂಚಿಯನ್ನು ಅಣಕಿಸುತ್ತ ಸುತ್ತುತ್ತಿರುವದನ್ನು ಭವಿಷ್ಯ ಸೂಚಿಯು ತಡೆದು, ಗಾಂಭೀರ್ಯದಿಂದ

ಭವಿಷ್ಯ ಸೂಚಿ—

ಬೆಸ್ತರ ಮನೆಯೊಳು ಬೆಳೆದವನು
ರಾಧಾಮಾತೆಯ ಮಗನವನು
ಭಾರತಸಮರದ ಕಲಿಯವನು
ನಾಳೆಯೊ ನಾಡದೊ....ಘುಮ್-ಘುಮ್-ಘುಂ

ಶಕ್ತಿನಿ— [ಆಶಾಭಾವದಿಂದ] ಬೆಸ್ತರ ಕುನ್ನಿಯು ಆರವನು ?

ಡಾಕಿನಿ— [ಹಿಗ್ಗಿನಿಂದ] ಮುಕುಟ ಮಂಡಿತನು ಇಹನೇನು ?

ಎಲ್ಲರೂ

ಆರವನು ? ಆರವನು ? ಬೆಸ್ತರ ಕುನ್ನಿಯು
ಆರವನು ?

(ಎಂದು ಒಂದೇ ಸವನೆ ಕೇಳತೊಡಗಲು ಕೋರೆದಾಡೆಯು ಗಂಭೀರಳಾಗಿ ಗಹಗಹಿಸಿ ನಗುತ್ತ : )

ಅಡಗು ದಿನಿಗಳೆ ಬನ್ನಿ ನೆತ್ತರುಣಿಗಳೆ ಬನ್ನಿ
ಬೆಸ್ತರವನವನಾರು ಗೊತ್ತಿದೆಯೆ ನಿಮಗೆ ?

(ಮರುಳುಗಳೆಲ್ಲ:)

ನೀನಾರೆ ಹೇಳಮ್ಮ ನೀನೆಮ್ಮ ಜಾಣೆ

ಬೆಸ್ತರವನವನಾರು ಹೇಳಿಮ್ಮ ರಾಣಿ

**ಕೋರೆದಾಡೆ**— [ ತಿಳಿ ಹೇಳುವಂತೆ ]

ರಾಧೇಯನೆಂಬವನು
ಕುಂತಿಯ ಮಗನು ತಾನು
ಸೂರ್ಯಸುತನೇ ಅವನು
ಪಾಂಡು ಪುತ್ರರಿಗೆಲ್ಲ ಹಿರಿಯ ಸೋದರನು.
ನಿಮಗಿನ್ನು ಹಿರಿಯೂಟ.
ಕಾದಿಹುದು ಸವಿಯೂಟ.
ಕರ್ಣನೆದೆಯೊಳಗಿರುವ ನೆತ್ತರೂಟ
ಅಡಗು ದಿನಗಳೆ ಬನ್ನಿ! ನೆತ್ತರುಣಿಗಳೆ ಬನ್ನಿ!
ಬೆಸ್ತರವನವನಾರು ಗೊತ್ತಾಯ್ತೆ ನಿಮಗೆ?

[ ಎಂದು ಗಹಗಹಿಸಿ ನಗುವದು ]

**ಶಕ್ತಿನಿ**— ( ಅಸಹ್ಯದಿಂದ )

ಸೋದರರ ಕೊಲೆಗೊಂಬ ಕರ್ಣಸೋದರನೆಮಗೆ
ಅವನೆದೆಯ ರಕ್ತವೇ ದೂರವಿರಲಿ
ನಾಯಿ ನರಿಗಳಿಗದುವು ಮೀಸಲಿರಲಿ

**ಡಾಕಿನಿ**— [ ಶಕ್ತಿನಿಯನ್ನು ಪ್ರತಿಭಟಿಸುತ್ತ ]

ಆವ ನೆತ್ತರವೇನು ಸುಮ್ಮನಿರು ಖೋಡಿ!
ಹಸಿದು ಕಂಗೆಟ್ಟಿರುವ ತೆರೆದೊಡಲ ನೋಡಿ!

**ಎಲ್ಲರೂ**— ( ಆನಂದದಿಂದ )

ಸೂರ್ಯಸುತನು ಬಿದ್ದ ದಿನವೆ
ನಮಗೆ ನೆತ್ತರೂಟವು;
ವೀರ ಕರ್ಣನಳಿದ ದಿನವೆ
ನಮಗೆ ಶಾಂತಿ ಸೌಖ್ಯವು

( ಎನ್ನುತ್ತ ಮುದುಕಿಯರೆಲ್ಲ ಚಪ್ಪಾಳೆಯಿಕ್ಕುತ್ತ ಒಂದೊಂದಾಗಿ ರಂಗಸ್ಥಳದಿಂದ ಸಾಗತೊಡಗುವವು. ಕೊನೆಯದಾಗಿ ಭವಿಷ್ಯ ಸೂಚಿಯು)

ಕುರುಕುಲ ಪ್ರಾಣನೆ ಢುಮ್–ಢುಮ್–ಢುಂ
ವೀರ ಕರ್ಣನೇ ಢುಮ್–ಢುಮ್–ಢುಂ
ಬೆಸ್ತರ ಕುನ್ನಿಯೆ ಢುಮ್ ಢುಮ್ ಢುಂ
ರಾಧಾಸುತನೇ ಢುಮ್

ಢುಂ-ಢುಂ-ಢುಂ ........ ಎಂದು ಢುಮಿಕೆಯನ್ನು ಬಾರಿಸುತ್ತ ಸಾಗುವ ಹೊತ್ತಿಗೆ

— ತೆರೆ —

## ದೃಶ್ಯ ಐದು

[ರಾಧೇಯನ ಪಾಳೆಯದಲ್ಲಿ ಮಧ್ಯರಾತ್ರಿಯ ದೀಪವು ಮಂದವಾಗಿ ಉರಿಯತೊಡಗಿದೆ. ದುರಂತಮಯವಾದ ಜೀವನದ ಗಾಳದಲ್ಲಿ ಸಿಕ್ಕು ಚಿಬ್ಬೆಯಾದ ಭಯಂಕರವಾದ ನಿರಾಶೆಯು ಪ್ರತ್ಯಕ್ಷ ಮೂರ್ತಿಯಂತೆ ರಾಧೇಯನ ಮುಖದಬಣ್ಣ ಕೆಟ್ಟು ಹೋಗಿದೆ. ಹರವಿದ ಕೂದಲು, ತೆರೆದ ಎದೆ, ಅಸ್ತವ್ಯಸ್ತವಾದ ನಿಲವು ಇವೆಲ್ಲ ಆವನ ವ್ಯಕ್ತಿತ್ವಕ್ಕೊಂದು ಭೀಕರತೆಯನ್ನು ಹುಟ್ಟಿಸಿವೆ. ಆಗಾಗ ಬಿಡುತ್ತಿರುವ ನಿಟ್ಟುಸಿರಿನ ಗಾಳಿಗೆ ತತ್ತರಿಸುವಂತೆ ದೀಪವು ಕೂಡ ಅಲ್ಲಾಡತೊಡಗಿದೆ. ಹೃದಯದ ಕೆಚ್ಚು ಹೌಹಾರಿ ನಿಂತಾಗ ಅದನ್ನು ಜಪ್ಪಿಸಿ ಹಿಡಿಯುವವನಂತೆ ಎರಡೂ ಕೈಗಳನ್ನು ಎದೆಗೆ ಒಟ್ಟಿಕೊಂಡು ಶೂನ್ಯ ದೃಷ್ಟಿಯಲ್ಲಿ ನೋಡುತ್ತ ಹತಾಶಾಭಾವದಲ್ಲಿ ]

ರಾಧೇಯ—ವಂಚನೆಯ ಬಾಳಿಳಿದು ಬದುಕುವದಕಿಂತಲೂ
ಮರಣವೇ ಲೇಸೆನಗೆ. ಸ್ವಾರ್ಥದುರಿಯೊಳಗೆನ್ನ
ಹಿಂಡಿರುವ ಮಾತಾಯಿ, ಪಕ್ಷಪಾತದೊಳೆನ್ನ
ಭೇದಿಸಿದ ಪರಮಾತ್ಮ, ಧರ್ಮಸಂಕಟಕೆನ್ನ
ನೂಕಿನಿಂತಿಹರಿಂದು. ಮೂಲೋಕಪತಿಯೆಂದು
ಗರುವ ತಾಳಿವೆ ನರನಕೊಂದು ಬಾಳುವ ಕಲಿಯು
ಕೊಲ್ಲುವದಕಿಂದಿಲ್ಲ. ಸೋದರನ ಕೊಲ್ಲುವೊಡೆ
ತಾಯಿಗಿತ್ತಿಹ ವಚನ ಮಣ್ಣುಪಾಲಾಗುವುದು
ಕೊಲ್ಲದೊಡೆ ವೀರ ದುರ್ಯೋಧನನ ಮುಕುಟವೇ
ಕಳಚುವುದು. ಆ ಮುಕುಟ ರಕ್ಷಣೆಗೆ ಬದ್ಧವಾ
ದವನೆನ್ನ ಪ್ರತ್ಯಕ್ಷವಲ್ಲಿಯೇ ಹುಡಿಯೊಳದು ಹೊರಳುವದ
ಕಾಣಲಾ! ಹಗೆಗಳನ್ನಿರಿದವರ ರುಧಿರಾಂಬು
ಸ್ರಾವದಲಿ ತೊಳೆದದನು ಬೆಳಗಲಾ! ದೈವವೇ!
ಅಂಗಮಾತೆಯ ನೆನೆದು ಕೌರವನ ಕಾಯಲಾ!
ವಚನಭಂಗವ ಮಾಡಿ ತಾಯಿಯನು ಬಿಸುಟಲಾ!
ವಂಚನೆಗೆ ವಂಚನೆಯೆ ಮದ್ದೆಂದು ನಂಬಲಾ!
ಬದುಕಿನರ್ಥವಿದೇನು? ಬಾಳಿ ಬದುಕುವೆನೇಕೆ?
ಆರೊಡನೆ ಈ ಬವರ? ಯಾರ ಸಂತೋಷಕ್ಕೆ?

ತಾಯಿ ಸ್ವಾರ್ಥದ ಮೂರ್ತಿ! ದೇವನೇ ವಂಚಕನು.
ದೊರೆಯ ದೈವವು ಕೂಡ ತೆರೆಮರೆಯೊಳಾಡುತಿದೆ.
ಮುಪ್ಪುರಿಯ ಗೋಳಿದುವು ಬಾಳ ಮೂರಾಬಟ್ಟೆ!
ನನಗಾವ ದಾರಿಯಿದೆ? ನನಗಾವ ಮೋಕ್ಷವಿದೆ?
ಸ್ವಾಮಿನಿಷ್ಠೆಯ ತೋರಿ ಬಂಧುಗಳನಿರಿಯಲಾ!
ಸ್ವಾಮಿದ್ರೋಹವ ಬಗೆದು ಸೋದರರನುಳುಹಲಾ!
ಇಲ್ಲದೊಡೆ,........ಇಲ್ಲದೊಡೆ, ದೈವಹತನಾಗಿರುವ
ಹತವೀರ್ಯನಂತಾನು ಮರಣವನ್ನಪ್ಪಲಾ!
ಸಾವಕೆಳೆಬಗೆಯಲಾ! ಸಾ-ವ-ಕೆ-ಳೆ-ಬಗೆ-ಯ-ಲಾ!

(ಈ ಭಾವವು ಬರುವಹೊತ್ತಿಗೆ ಸುಯ್ಯೆಂದು ಗಾಳಿಬೀಸತೊಡಗುತ್ತದೆ. ಈ ಗಾಳಿಯು ಹೊಡೆತಕ್ಕೆ ತತ್ತರಿಸಿದ ದೀಪದಬೆಳಕು ಸನಿಯದ ಗೋಡೆಯಲ್ಲಿ ನೇತಾಡುತ್ತಿರುವ ಒರೆಯುಳಿದ ಚೂರಿಯಮೇಲೆ ಬೀಳುತ್ತದೆ. ರಾಧೇಯನ ದೃಷ್ಟಿ ಆ ಶಸ್ತ್ರದಮೇಲೆ ಬಿದ್ದ ಕೂಡಲೆ ಅವನು ಅದನ್ನೇ ನೆಟ್ಟದೃಷ್ಟಿಯಿಂದ ನೋಡತೊಡಗುತ್ತಾನೆ. ಯಾವುದೋ ನಿರ್ಧಾರವು ಬಲಿತು ನಿಂತಂತೆ ಅವನು ಆ ಚೂರಿಯನ್ನು ಆಶಾಪೂರ್ಣ ದೃಷ್ಟಿಯಿಂದ ಇನ್ನಷ್ಟು ಕೆಕ್ಕರಿಸಿ ನೋಡತೊಡಗುತ್ತಾನೆ. ನಿರ್ಧಾರದಿಂದ ಅದನ್ನು ತೆಗೆದುಕೊಳ್ಳಲು ಕೈ ಚಾಚುತ್ತಾನೆ. ಕೈ ನಡುಗುತ್ತದೆ. ಗಾಳಿ ರಭಸದಿಂದ ಬೀಸತೊಡಗುತ್ತದೆ. ರಾಧೇಯನು ದೊಪ್ಪನೆ ಹಿಂದೆ ಬಿದ್ದು ಬಿಡುತ್ತಾನೆ. ಅವನ ಸರ್ವಾಂಗ ನಡುಗತೊಡಗುತ್ತದೆ. ನಡುಗುವ ಸ್ವರದಲ್ಲಿ)

ವಂಚನೆಯ ಬಾಳಿಳಿದು ಬದುಕುವದಕಿಂತಲೂ
ಬಾಳ್ಕೊನೆಯೊಳಿಂದೆನ್ನ ಬಾಳ ಕೊನೆಗೊಳಿಸುವೆನು.
ಬದುಕಿ ಸಾವುದಕಿಂತ ಸತ್ತು ಬದುಕುವರೀತಿ
ಸ್ವಾರ್ಥಿಗಳ ಕಣ್ದೆರೆಯ ಚಕ್ರನೇ ಹರಿದೀತು!
ಯುಗಯುಗದೊಳೆಂದಿಗೂ ಕರ್ಣನೆದೆ ಗುಡುಗೀತು!

[ ಎನ್ನುತ್ತ ಸರ್ರನೇ ಎದ್ದು ಆ ಚೂರಿಯನ್ನು ರಭಸದಿಂದ ಕಿತ್ತುಕೊಳ್ಳುತ್ತಾನೆ. ಬಿರುಗಾಳಿಯು ವಿಲಕ್ಷಣಸ್ವರದೊಂದಿಗೆ ಭರ್ರಭರ್ರನೆ ಬೀಸತೊಡಗುತ್ತದೆ. ದೂರದ ರಣಪ್ರದೇಶದಿಂದ ವಿಕಟಾಟ್ಟಹಾಸಗಳ ವಿಕೃತಸ್ವರಗಳು ಕೇಳಿಬರುತ್ತವೆ. ರಾಧೇಯನು ಮುಷ್ಟಿಯಲ್ಲಿ ಶಸ್ತ್ರದಹಿಡಿಕೆಯನ್ನು ಬಲವಾಗಿ ಹಿಡಿದುಕೊಳ್ಳುವಹೊತ್ತಿಗೆ ಭೀಕರವಾದ ಕರಾಳ ರೂಪವೊಂದು ಗಹಗಹಿಸಿ ನಗುತ್ತ ಅವನೆದುರು ದಿಗ್ಗನೆ ನಿಲ್ಲಲು ಅವನು ಭೀಕರ ದೃಷ್ಟಿಯಿಂದ ಅದನ್ನು ನೋಡುತ್ತ ]

ಭೀಕರಾಕಾರದೊಳು ಗಹಗಹಿಸಿ ನಗುತಿರುವ
ಪುರುಷ ಭೀಮಾಕೃತಿಯೆ ನೀನಾರು ಹೇಳುವಿಯು?

[ ಆಕೃತಿಯು ನಗೆಯುು ಇನ್ನೂ ಹೆಚ್ಚಾಗುವದು ]

ವಿಷವ ಸೂಸುತಲಿರುವ ನಗೆಯ ನಿಲ್ಲಸದಿರಲು
ಚೂರಿಯಿಂದಿರಿದೇನು! ಎಚ್ಚರಿಕೆ! ಬಲುಜೋಕೆ!
ರಾಧೇಯನಿದಿರಾರು ನಕ್ಕು ಬದುಕಿದರಿಲ್ಲ.

**ಆಕೃತಿ**— ( ವಿಕಟವಾಗಿ ನಕ್ಕು ಕೂಡಲೇ ಗಂಭೀರವಾಗಿ )
ನಟ್ಟ ದಿಟ್ಟಿಯೊಳೆನ್ನ ನೋಡೆಲವೊ ರಾಧೇಯ
ನಾನಾರು ತಿಳಿದೀತು. ಸ್ವಾಮಿದ್ರೋಹದ ಜೊತೆಗೆ
ಆತ್ಮದ್ರೋಹವ ಬಗೆದು ತನ್ನನೇ ಕೊಲುತಿರುವ
ಕೇಡಾಳಿಯೆಂದಿಗೂ ಅನ್ಯರನು ಕೊಲಲಾರ.

( ಚೊಳ್ಳನೆ ನಕ್ಕು ) ನೀನೆನ್ನ ತರಿಯುವೆಯ? ಇರಿದು ಕೊಲ್ಲುವ ಮಾತು
ಗಂಡೆದೆಯ ಗಂಡಸಿಗೆ; ಆತ್ಮಘಾತುಕಿಗಲ್ಲ.

**ರಾಧೇಯ**— ( ತನ್ನಲ್ಲಿ ) ಎನ್ನಂತರಂಗವನೆ ಭೇದಿಸಿದ ನುಡಿಗಳಿವು.
ಭೂತಬೆಂತರನೊಬ್ಬ ನುಡಿಯುತಿಹ ಕೇಡಿದುವು.
ನನಗಿವನ ಪರಿವೆಯೇ? ( ಹೊರಗೆ ) ಭಾರತದ ಕೊಳಗುಳವ
ನೆಬ್ಬಿಸಿದ ಕಡುಗಲಿಯುನೇಳಿಸುವ ನುಡಿಯಾಡಿ
ಸಾವ ಮುನ್ನವೆ ದೂರ ಸರಿಯತ್ತ ಬೆಂತರನೆ!
ರಣಮತ್ತ ರುದ್ರನನು ಕೆಣಕುವದು ತರವಲ್ಲ.

**ಆಕೃತಿ**—( ಗಟ್ಟಿಯಾಗಿ ) ಆರವನು ರಣಮತ್ತ ರುದ್ರನವ?

**ರಾಧೇಯ**— ( ಎದೆ ಸೆಟಸಿ ) ರಾಧೇಯನೆಂಬವನು.

**ಆಕೃತಿ** ( ವ್ಯಂಗ್ಯವಾಗಿ ) ಸತ್ತಿಹನು ರಾಧೇಯ
ಮರಣ ಹೊಂದಿಹನವನು.

**ರಾಧೇಯ**— ( ಆಕ್ರೋಶದಿಂದ ) ನಿನ್ನೆದುರಿಗಿಪನಾರು

ಕಣ್ಣು ಹಿಗ್ಗಿಸಿ ನೋಡು. ಕಪ್ಪು ದೇಹದ ಜೊತೆಗೆ
ಕಣ್ಣು ಕೂಡಾ ಕುರುಡೆ ? ನಾನಾರು ನೋಡೊಮ್ಮೆ !

ಆಕೃತಿ— ( ನಿರ್ದಾಕ್ಷಿಣ್ಯದಿಂದ )
ಬಾಳ ಕೋಲಾಹಲದಿ ದೊರೆಯ ಕೊಂದವ ನೀನು !
ಬುದ್ಧಿ ಬಾಹಿರನಾದ ಹಿರಿಯ ವಂಚಕ ನೀನು !
ಹಿರಿಯ ಹೆಸರನು ಮರೆದು ಕೌರವನಿಗಪದೆಶಿಯ
ತಂದೊಡ್ಡಿ ನಿಂತಿರುವ ಸ್ವಾಮಿದ್ರೋಹಿಯು ನೀನು !
ರಾಧೇಯನರೆಮರುಳು

ರಾಧೇಯ— ( ತತ್ತರಿಸುತ್ತ ) ಅರೆಮರುಳು ನಾನಲ್ಲ;
ದ್ರೋಹ ಬಗೆದವನಲ್ಲ.

ಆಕೃತಿ— ಜೂಜಿಯನ್ನೆತ್ತಿರುವದಾವ ಗೌರವಕಾಗಿ
ಹೇಳುವಿಯ ರಾಧೇಯ ! ಆತ್ಮಘಾತುಕಿ ನೀನು !
ಪೂರ್ಣ ಮರುಳೇ ನೀನು !

ರಾಧೇಯ— (ಕದಡಿ ಕಂಗೆಟ್ಟವನಂತೆ) ವಂಚನೆಯ ಫಲವಿದುವು
ಕರ್ಣನಾತ್ಮಾಹುತಿಯು; ಹಿರಿಯ ಜೀವನದಲ್ಲಿ
ಕಹಿಯೇರಿ ಬಂದಾಗ, ಕಾವ ಶಕ್ತಿಗಳಿಲ್ಲ
ನಂಜಾಗಿ ನಿಂತಾಗ, ಜೀವನದ ಸಫಲತೆಯೆ
ಹೀನಾಯವಾದಾಗ, ವಿಧಿಯಟ್ಟಹಾಸದೊಳು
ಕಾಳಹಸ್ತದೊಳೆನ್ನ ಜೀವನವನೆಳೆವಾಗ
ಗುರಿಯ ಕಾಣದ ಜೀವ ವ್ಯರ್ಥವೇ ಆದಾಗ
ಸಾವ ಕೆಳೆಗೊಳ್ಳುವುದು ದೋಷವೇ ಬೆಂತರಾ !
ಅರ್ಥವಿಲ್ಲದ ಬಾಳು ಇದ್ದರೇಂ, ಬಿದ್ದರೇಂ?

ಆಕೃತಿ— ಸ್ವಾಮಿನಿಷ್ಠೆಗೆ ಬಾಳು ಕಾಲ್ತೊಡಕೆ ಮೂಢ !

ರಾಧೇಯ— ( ಗದ್ಗರಿಸುತ್ತ ) ದೂರ ಸರಿ ಬೆಂತರಾ; ನುಡಿಯದಿರು ಬೆಂತರಾ
ಸಾಗತ್ತ ಬಹುದೂರ ಹೋಗತ್ತ ಬೆಂತರಾ !

ಆ ಬಾಳಿನೊಳಗೊಮ್ಮೆ ಬಾಳಗೌರವವಿತ್ತು
ಇಂದಿಲ್ಲ ನಡೆಯುತ್ತ ಜೀತಾಳನಾಡುತ್ತ.

**ಆಕೃತಿ**— ( ಸರಿಯುತ್ತ )ಬೆಂತರನು ನಾನಲ್ಲ; ಭೂತನೂ ನಾನಲ್ಲ.
ಜಗದಂತರಂಗವನು ಹೊಕ್ಕಿಳಿದು ಹೊರಗೆಳೆವ
ಧೂರ್ತಶಕ್ತಿಯು ನಾನು. ನಿನಗಾಗಿ ಮರುಗುವೆನು
ರಾಧೇಯ ! ನಿನ್ನ ಜೀವನಕಾಗಿ...........

**ರಾಧೇಯ**— ( ನಿತ್ರಾಣನಾಗಿ ) ಆವ ಶಕ್ತಿಯೆ ಇರಲಿ
ನಡೆಯುತ್ತ ಬಹುದೂರ.

(ಆಕೃತಿಯು ಕಣ್ಣುಹನಿಗಳನ್ನು ತೊಡೆದುಕೊಂಡು ಸರಿಯುತ್ತಿರುವಾಗ ರಾಧೇಯನು "ಸ್ವಾಮಿಸಿಷ್ಠೆಗೆ ಬಾಳು ಕಾಲ್ತೊಡಕೆ ?" .... ಎಂದು ಗುಣುಗುಣುತ್ತಿರುವಾಗಲೇ ಚೂರಿಯನ್ನು ನೆಗವಿ—

ಮನವ ಕೋಲಾಹಲದೊಳಿಳಿಬಿಟ್ಟ ಶಕ್ತಿಯೇ
ನೀನೆಲ್ಲಿ ? "

ಎನ್ನುತ್ತ ಮೇಲೆತ್ತುತ್ತಿರುವಾಗ ಜಗ್ಗನೆ ಬೆಳಕು ಬಿದ್ದಂತಾಗಲು ರಾಧೇಯನು ಮೊಗವೆತ್ತಿ ನೋಡುವನು. ಮಣಿ ಕಾಂಚನ ಭೂಷಣ ಕಿರೀಟ ಧಾರಿಣಿಯಾದ ತೇಜಸ್ವಿನಿಯೊಬ್ಬಳು ದಿಗ್ಗನೆ ಬಂದು ಮಂದಸ್ಮಿತಳಾಗಿ ನಿಂತದ್ದು ಕಾಣಬರುವದು. ರಾಧೇಯನಿಗೆ ಆ ಬೆಳಕು ಸಹಿಸದಾದರೂ ಆ ವ್ಯಕ್ತಿಯ ಮಂದಸ್ಮಿತಕ್ಕೆ ಮಾರುವೋದವನಂತೆ ಶಾಂತ ಚಿತ್ತದಿಂದ ...)

ನೀನಾರು ದೇವಿ! ಏತಕಾಗಿಲ್ಲಿಗೈದಿಹೆ?
ಪಾಳೆಯದೊಳೊಬ್ಬಳೇ ಬಹುದೂರ ಬಂದಿರುವಿ.
ಬೆಸನವಾವುದು ಹೇಳು ?

(ಎಂದು ಕೇಳುತ್ತಿರುವಾಗ ಆ ತೇಜಸ್ವಿನಿಯ ಮಂದಹಾಸವು ಪೂರ್ಣವಾಗಿ ಅರಳಿ ನಿಂತಿರುವದನ್ನು ನೋಡಿ ಇನ್ನೂ ಶಾಂತನಾಗಿ...

ಮುಕುಟ ಮಂಡಿತಳಾಗಿ ಮುಗುಳು ಸೂಸುವ ತಾಯಿ !
ರಾಜ್ಯಲಕ್ಷ್ಮಿಯೆ ನೀನು ! ಪೊಡಮಡುವೆ ಹೇಳಮ್ಮ !
ನೀನಾವ ಕುಲಲಕ್ಷ್ಮಿ ಬಂದಿರುವ ಮಾತೇನು ?

ತೇಜಸ್ವಿನಿ:—ರಾಜಾಧಿರಾಜರೊಳು ರಾಜನೇ ಆಗಲಿಹ
ರಾಧೇಯನೆಂಬವಗೆ ರಾಜ್ಯವೀಯಲು ಬಂದೆ.
ಕೈಯ್ಯ ಖಡ್ಗವ ಕಸಿದು ನಿನ್ನ ಕಾಯಲು ಬಂದೆ.

ರಾಧೇಯ— (ಅವಳನ್ನು ಸೂಕ್ಷ್ಮವಾಗಿ ನೋಡಿ ಗಾಬರಿಯಾಗಿ)
ಆವ ರಾಜ್ಯವು ನನಗೆ ಹೇಳಬಹುದೇ ತಾಯಿ!
ನನಗಾವ ರಾಜ್ಯವನು ಕೊಡಬಲ್ಲೆಯಮ್ಮ!

ತೇಜಸ್ವಿನಿ:— (ಗಾಂಭೀರ್ಯದಿಂದ ಮಂದಸ್ಮಿತವನ್ನು ಬೀರುತ್ತ)
ಪಾಂಡವರ ರಾಜ್ಯವೇ ನಿನ್ನದಾಗಿಹುದಯ್ಯ!

ರಾಧೇಯ:— (ಕಳವಳಬಟ್ಟು, ತಪ್ಪುಹಿಡಿದವನಂತೆ)
ಪಾಂಡವರ ರಾಜ್ಯವೇ ಕೌರವನದಾಗಿರಲು
ಮತ್ತಾವ ನವರಾಜ್ಯ ಪಾಂಡವರಿಗಿಹುದಮ್ಮ
ಭರತ ಭೂಮಿಯೊಳಿಂದು ಬಾಳುತಿಹ ನಾಡೊಂದೆ
ಕೌರವನದಿಹುದಮ್ಮ!

ತೇಜಸ್ವಿನಿ:— (ತಿಳಿಸಿ ಹೇಳುವಂತೆ) ನಾಡಿನಾಳ್ತನವನ್ನು
ತೂಗುತಿಹ ಕೈಗಳಲಿ ಅದಲು ಬದಲಾಗುವದು
ಸೃಷ್ಟಿ ನಿಯಮವು ಕಂದ!

ರಾಧೇಯ:— (ಸ್ಪಷ್ಟವಾಗಿ) ಅದಲು ಬದಲಕು ಕೂಡ
ನಿಯಮವೊಂದಿದೆ ತಾಯಿ! ರಾಜ್ಯವಾಳುವ ಸೊಗವ
ಪಡೆದು ನಾ ಬರಲಿಲ್ಲ!

ತೇಜಸ್ವಿನಿ:— (ಕೃಪಾಕಟಾಕ್ಷದಿಂದ ಮನವೊಲಿಸುವಂತೆ ರಾಧೇಯನನ್ನು ನೋಡಿ)
ಆ ಸೊಗವನಿಂದೆಯೋ ತಂದಿಹೆನು ಕಂದಯ್ಯ!
ಪಾಂಡವರ ಜತೆಗೂಡಿ ಹಿರಿಯ ಸೋದರನಾಗಿ
ಬಾಳುವೊಡೆ ನಿನಗಿಹುದು ಸಕಲ ರಾಜ್ಯದ ಸಿರಿಯು.
ನಿನ್ನದೇ ಈ ರಾಜ್ಯ! ಬಳಿಕಿಲ್ಲ ಈ ವ್ಯಾಜ್ಯ.

ರಾಧೇಯ:— (ಅಧೀರನಾಗಿ) ಇಂದಿಲ್ಲಿ ಬಂದೆನಗೆ ರಾಜ್ಯವೀಯುವ ತಾಯಿ
ಇಷ್ಟು ದಿನಗಳವರೆಗೆ ನೀನೆಲ್ಲಿ ಮಲಗಿದ್ದೆ?

ತೇಜಸ್ವಿನಿ— ನಿನ್ನ ವಿಧಿಯನು ಕೇಳು! ತಾಯಿ ಕುಂತಿಯ ಕೇಳು!

ರಾಧೇಯ— ನಾನೆನ್ನ ದೈವವನು ಕಂಡು ಕೊಂಡಿಹೆನಮ್ಮ!
ಕೌರವನಿಗಾನಿಲ್ಲ, ಪಾಂಡವರಿಗಾನಿಲ್ಲ.
ನನ್ನ ಜೀವನವನ್ನು ಕೊಂದು ತಿಂದವರೊಡನೆ
ನನಗಾವ ಆಶೆಯೂ ಬದುಕಿ ಬಾಳುವದಿಲ್ಲ!

ತೇಜಸ್ವಿನಿ— ಮುಕುಟ ಮಂಡಿತನಾಗಿ ಬಾಳಲಾರೆಯ ನೀನು!

ರಾಧೇಯ— (ಉದ್ರಿಕ್ತನಾಗಿ ಆರ್ಭಟಿಸುತ್ತ)
ಹದ್ದು ಕಾಗೆಗಳದನು ತಿಂದು ತೇಗಲಿ ಹೋಗು!
ನನಗದರ ಪರಿವೆಯೇ? ರಾಜ್ಯದಾಹಕ್ಕಾಗಿ
ಸಾಕಿ ಸಲುಹಿದ ದೊರೆಯ ದ್ರೋಹಬಗೆದವನೆಂದು
ಕುಂದಿಟ್ಟು ಜಗವೆನ್ನ ಕರೆಯಲಾರದೆ ತಾಯಿ!
ಹಿರಿಯ ದ್ರೋಹವನೆನಗೆ ಬೋಧಿಸುವ ಮಾಯಾವಿ
ಕೂಡಲೇ ಮರೆಯಾಗು

ತೇಜಸ್ವಿನಿ— ತಾಯಿ ಮಕ್ಕಳ ಕೂಡಿ ........

ರಾಧೇಯ— (ತಡೆದು) ದ್ರೋಹದೊಳಗೆಲ್ಲರೂ
ಸರಿಸಮಾನರು ಜೋಡಿ. ನೀನೆನ್ನ ಕೆಣಕದಿರು.

ತೇಜಸ್ವಿನಿ— ಪಾಂಡವರ ರಾಜ್ಯವೇ ........

ರಾಧೇಯ— (ಬೇಸರದಿಂದ) ಹಾಳಾಗಿ ಹೋಗಲದು.
ಯಾರ ರಾಜ್ಯದ ಘನತೆ ಯಾವ ಪಾಪಿಗೆ ಹೇಳು.

ತೇಜಸ್ವಿನಿ— ಪಾಂಡವರ ಜಯಲಕ್ಷ್ಮಿ ಗೀಮಾತ ಹೇಳುವಿಯ?

ರಾಧೇಯ— (ಕಕ್ಕಾಬಿಕ್ಕಿಯಾಗಿ ಆವಳನ್ನು ಸಂತಪ್ತನಾಗಿ ನೋಡುತ್ತ)
ಪಾಂಡವರ ಜಯಲಕ್ಷ್ಮಿ! ಪಾಂಡುಪುತ್ರರಿಗಿಂದು
ಜಯವಾಗಿ ಹೋಯಿತೇ? ಹೇಳದಿರು ಮಾಯಾವಿ!
(ಆವೇಶದಿಂದ) ಪುಸಿಯಿದುವು! ಸುಳ್ಳಿದುವು, ಬರಿಯ ಮೋಸದ ಕಂತೆ!

ಕಲಿಕರ್ಣನೆಂಬವನು ಜೀವಂತವಿರುವಾಗ
ಪಾಂಡವರಿಗೆಂದಿಗೂ ಜಯಮಾಲೆ ಸಿದ್ಧಿಸದು.

(ತೇಜಸ್ವಿನಿಯು ಅಟ್ಟಹಾಸದಿಂದ ಖೊಳ್ಳನೇ ನಗುವಳು)

ಜಯವ ಗರ ಹೊಡೆದಂತೆ ಗಹಗಹಿಸಿ ನಗುತಿರುವ
ನಗೆಯ ಹೊಗೆ ತೇಲಿಸುವ ಪಾಂಡವರ ಲಕ್ಷ್ಮಿಯೇ !
ಜಯಲಕ್ಷ್ಮಿ ನೀನಲ್ಲ, ಕುರುರಾಜ್ಯ ಲಕ್ಷ್ಮಿಯೇ
ಜಯಲಕ್ಷ್ಮಿಯಾಗಿಹಳು. ಕುರುಕುಲದ ಸಂತಾನ
ವಿಂದೆನ್ನ ಕವಚದೊಳು ಸುಕ್ಷೇಮವಾಗಿರಲು
ಕೌರವನಿಗಪದೆಸೆಯೆ ? ದೊರೆಗೆ ಸೋಲೆನಿತಿಲ್ಲ.
ಕರ್ಣನಳಿಯುವ ಮುನ್ನ ಸೋಲೆಂಬುದವಗಿಲ್ಲ.

( ತೇಜಸ್ವಿನಿಯ ನಗು ಕಳಕಳಿಸುವುದು )

(ಸಂತಪ್ತನಾಗಿ) ಮತ್ತೆ ನಗು ! ಮತ್ತೆ ನಗು ! ನೀನಿಂತು ನಗಬೇಡ.
ನಕ್ಕು ಸೈರಣೆಯನ್ನು ಕಲಕಿ ನೀ ಕೆಡಬೇಡ.

(ತೇಜಸ್ವಿನಿಯ ನಗೆಯು ಸಮುದ್ರದ ತೆರೆಗಳ ಹಾಗೆ ಮೇಲ್ಮೇಯ್ದು ಬರುವದನ್ನು ಸಹಿಸಲಾರದೆ)

ನಿನ್ನ ನಗೆ ತೆರೆ ಮತ್ತೆ ಸುಳಿದು ಸುಯ್ಯುವ ಮೊದಲು
ನಿನ್ನನೇ ಕೊಯ್ಯುವೆನು ! ತುಂಡರಿಸಿ ಚೆಲ್ಲುವೆನು !

(ಎನ್ನುತ್ತ ದಿಗ್ಗನೇ ಮುಂದೆ ಹೋಗಿ ಪಾಂಡವರ ಜಯಲಕ್ಷ್ಮಿಯನ್ನು ಹೊಯ್ಯಲು ಹೋಗುವಾಗ-ಗುಡುಗು–ಮಿಂಚು– ಎಲ್ಲ ಕಡೆಗೂ ಕತ್ತಲೆ–ಕ್ಷಣಾರ್ಧದಲ್ಲಿ ಮತ್ತೆ ಬೆಳಕು ತೋರಿದಾಗ ಅಲ್ಲಿ ತೇಜಸ್ವಿನಿಯಿಲ್ಲ. ಬದಲಾಗಿ ಹೀರಿಹೋದ ನಿಸ್ತೇಜವಾದ ಮುಖದಲ್ಲಿ ಚಿಂತೆಯನ್ನು ಸೂಸುವಂತೆ ಕುರುರಾಜ್ಯ ಲಕ್ಷ್ಮಿಯು ಕಣ್ಣುಗಳಲ್ಲಿ ನೋವನ್ನು ತುಂಬಿ ಕೊಂಡು ರಾಧೇಯನನ್ನು ಕೆಕ್ಕರಿಸಿ ನೋಡುತ್ತ ನಿಂತಿದ್ದಾಳೆ. ಆಕೃತಿಯನ್ನು ಗುರುತಿಸಿದ ರಾಧೇಯನು ಹಾಹಾಕಾರ .–)

ಕೌರವನ ಗದ್ದುಗೆಯ ಸಿಂಹಪೀಠದ ಮೇಲೆ
ರಾರಾಜಿಸುತ್ತಿರುವ ಕುರುರಾಜ್ಯಲಕ್ಷ್ಮಿಯೇ !

ಛತ್ರಚಾಮರಗಳನು ತೊರೆದು ಪಾಳಯಕೇಕೆ
ಬಂದಿರುವೆ ಹೇಳಮ್ಮ! ಏನು ನಿನ್ನೀ ಪಾಡು!
ರಾಜಮುಕುಟವದೆಲ್ಲಿ? ರಾಜದಂಡವದೆಲ್ಲಿ?
ಕುರುರಾಜನಂಕಿತದ ರಾಜಮುದ್ರೆಯ ಕಳಚಿ
ಪರದೇಶಿಯಂತೇಕೆ ಒಬ್ಬಳೇ ಬಂದಿರುವಿ?
ಏಕಛತ್ರಾಧಿಪನ ಕಾವ ಕರುಣೆಯ ತೊರೆದು
ಬಂದ ಕಾರ್ಯವಿದೇನು? ಬೇಗ ನುಡಿ ತಾಯಿ!

**ಕುರುಲಕ್ಷ್ಮಿ**— ( ನಿರಾಶೆಯ ನಿಟ್ಟುಸಿರಿನಲ್ಲಿ ಸೋತ ದನಿಯನ್ನು ತೋರುತ್ತ )
ಕುರುನಾಡ ರಕ್ಷೆಯಲಿ ಬದ್ಧಕಂಕಣನಾದ
ವೀರ ಕರ್ಣನ ಕೊನೆಯ ದರ್ಶನಕೆ ನಾಬಂದೆ.

**ರಾಧೇಯ**— (ಗಾಬರಿಯಾಗಿ) ಕೊನೆಯ ಸಂದರ್ಶನವೆ?

**ಕುರುಲಕ್ಷ್ಮಿ**— (ಸ್ಪಷ್ಟವಾಗಿ) ನಾಡರಕ್ಷಕರೆಲ್ಲ
ತತ್ತರಿಸಿ ನಿಲ್ಲುತಿರಲೆನಗಾವ ಮೋಕ್ಷವಿದೆ
ಹೇಳಬಹುದೇ ಕರ್ಣ! ನಿಂತ ನೆಲವೇ ಇಂದು
ನೆಲೆಯ ತಪ್ಪಿಸುತಿರಲು ನನಗಾರ ನೆರವಿಹುದು.

**ರಾಧೇಯ**— ವೀರ ದುರ್ಯೋಧನನು ಭಾಗ್ಯವಂತನು ತಾಯಿ!
ನೀನವನ ನೆರವಿನಲಿ ಬೆಳೆದು ನಿಂತಿರುವಾಗ
ನಿನಗಾವ ಕೊರತೆಯಿದೆ? ಸಿಡಿದು ಹೋಗುವ ಮಾತ
ಕನಸಿನಲ್ಲಿಯು ಕೂಡ ತರಬೇಡ ತಾಯಮ್ಮ!

**ಕುರುಲಕ್ಷ್ಮಿ**— (ನಿರಾಶೆಯ ದನಿಯಲ್ಲಿ)
ನೆರವಿತ್ತ ವೀರರೇ ಮೊಗವ ತಿರುವಿರುವಾಗ
ಏಕಾಂಗಿಯಾದವನ ಬಲವೆಂತು ನಿಂತೀತು?
ರಕ್ಷಣೆಯ ತಂದೀತು? ಕುರುವೀರರೆಲ್ಲರೂ
ಹೇಡಿಗಳು, ಕಪಟಿಗಳು, ದ್ರೋಹಿಗಳು, ವಂಚನೆಯ
ಮರುಳುಗಳು. ನಂಬುಗೆಯ ಕೊಲೆಮಾಡಿ ಅನ್ನದಾ
ತನ ಕೊಂದು ತೇಗುತಿಹ ರಾಕ್ಷಸರು.

**ರಾಧೇಯ—** (ನೋವಿನಿಂದ) ಕುರುರಾಜ್ಯ ಪಟ್ಟದಲಿ ಹಿರಿಯ ಹೆಸರನು ಗಳಿಸಿ
ರಾಜ್ಯಭಾರವ ಹೊತ್ತು ಕಾಳಗವನೆಸಗಿರ್ದ
ಹಿರಿಯ ಮುತ್ಸ್ವಾತರನು ಕಂಡಿದನು ಹೇಳಿದೆಯ ?
ಆಚಾರ್ಯ ಪುರುಷರನು ಕಂಡದ್ದೆಯಾ ತಾಯಿ ?

**ಕುರುಲಕ್ಷ್ಮಿ—** (ವ್ಯಂಗ್ಯಬೆರೆತ ದನಿಯಲ್ಲಿ ತೀಕ್ಷ್ಣವಾಗಿ)
ಸಾವಸಿದ್ಧತೆಯಲ್ಲಿ ಸಿದ್ಧಪುರುಷರು ನೋಡು
ಭೀಷ್ಮದ್ರೋಣರು ಕಂದ ! ಮುಕ್ತಜೀವಿಗಳವರು.
ಚಲಕೆ ಕಾದಿದರಿಲ್ಲ; ಜಯಕೆ ಕಾದಿದರಿಲ್ಲ.
ಸುಮ್ಮನೇ ಹೋರಾಡಿ ಸತ್ತುಹೋದನು ಒಬ್ಬ;
ಸತ್ತಂತೆ ಬಿದ್ದಿಹನು ಬೇರೊಬ್ಬ.

**ರಾಧೇಯ—** (ಸಂಕಟದಿಂದ) ಹಿರಿಯ ಕುಲದವರಿವರು.. ............

**ಕುರುಲಕ್ಷ್ಮಿ—** ತೆರೆಮರೆಯೊಳಾಡಿದರು........

**ರಾಧೇಯ—** ............ಕೌರವನ ರಕ್ಷಕರು...........

**ಕುರುಲಕ್ಷ್ಮಿ—** ವಂಚನೆಯ ತೋರಿದರು. ಇಂದು ನೀನೂ ಕೂಡ
ಕೌರವನ ಕೈಬಿಡಲು ನನಗಾರ ನೆರವಯ್ಯ ?

**ರಾಧೇಯ—** (ಒಮ್ಮೆಲೆ) ಕೌರವನ ಕೈಬಿಟ್ಟು ಕೇಡಾಳಿ ನಾನೆಂದು ನಿನಗಾರು
ಹೇಳಿದರು ?

**ಕುರುಲಕ್ಷ್ಮಿ—**(ಆಕ್ಕಸದಿಂದ) ಆರು ಹೇಳುವದೇಕೆ ?
ಕುರುಬದ್ಧ ವೈರಿಯೇ ಪಾರ್ಥನಾಗಿರುವಾಗ
ನೀನವನ ತಲೆಗಾವ ವಚನವನ್ನಿತ್ತಿಹುದು
ಯಾವ ಮಾತಿಗೆ ಸಾಕ್ಷಿ ?

**ರಾಧೇಯ—** (ಸಿಟ್ಟುಸಿರನ್ನು ಬಿಡುತ್ತ) ಬಲ್ಲ ಮಾತನು ಕೇಳಿ
ಕೆಣಕದಿರು ಮಾತಾಯಿ ! ವೀರ ಜೀವನದಲ್ಲಿ
ತ್ಯಾಗ ಭೂಷಣವಮ್ಮ !

**ಕುರುಲಕ್ಷ್ಮಿ—** ತಿರುವು ಮುರುವಾಗಿಹುದು
ನಿನ್ನ ತ್ಯಾಗವು ಕರ್ಣ. ಸ್ವಾಮಿ ಕಾರ್ಯದೊಳದುವು
ದ್ರೋಹವೇ ಆಗಿಹುದು.

**ರಾಧೇಯ—** ( ಏನೂ ಮಾತಾಡಲು ತೋಚದೆ ) ಆ ಸ್ವಾಮಿಗಾಗಿಯೇ............

**ಕುರುಲಕ್ಷ್ಮಿ—** ಭಾರತದ ಕೊಳಗುಳವ ರಚಿಸಿರುವ ವೀರನೀ
ರಣ ಹೇಡಿಯುಂತಿಂದು ಆತ್ಮ ಘಾತುಕಿಯಾಗಿ
ಬಾಳುವುದು ಕಂಡೆನ್ನ ಮನವು ಹೇಸುತಲಿಹುದು.
ದೊರೆಯು ಬೆನ್ನೊಳಗಿರಿವ ತ್ಯಾಗವನು ತೋರುವದು
ಯಾವ ಧರ್ಮವು ಕರ್ಣ! ತ್ಯಾಗ ಧರ್ಮಕ್ಕಾಗಿ
ರಣವ ಬಿಟ್ಟೆಯು ನೀನು! ಸ್ವಾಮಿ ಕಾರ್ಯಕ್ಕೆಂದು
ಶತಕೋಟಿ ಪ್ರಾಣಗಳನೇತಕ್ಕೆ ಬಲಿಕೊಟ್ಟೆ?
ಹೇಳಿದನು ಧರ್ಮಾವತಾರ ನೀ !

**ರಾಧೇಯ—** ಕಂಡುಂಡ ಮಾತನ್ನು ಮತ್ತೆ ಕೇಳುವಿಯಮ್ಮ!
ಧರ್ಮ ಸಂಕಟವೆನ್ನ ಕಾಣದಿಹೆಯೇ ತಾಯಿ.

**ಕುರುಲಕ್ಷ್ಮಿ—** ( ತೀಕ್ಷ್ಣವಾಗಿ )
ದೊರೆಗೆ ದ್ರೋಹವ ಬಗೆದು ಮಾತು ಜಾರಿಸುತಿರುವ
ವಿದ್ರೋಹಿ ನೀನಲ್ತೆ! ಸೂತ ಸಂಸಾರದೊಳು
ಬೆಳೆದು ನಿಂತವನಲ್ತೆ !

**ರಾಧೇಯ—** ( ನಡಗುತ್ತ ) ದೇವ ದೇವತೆಯಾಗಿ
ನೀನಿದನು ಹೇಳವಿಯ್ತು! ಸೂತ ಸಂಸಾರದೊಳು
ಬೆಳೆಯುಗೊಟ್ಟವರಾರು? ಹೇಳೆನ್ನ ಕುರುದೇವಿ!

**ಕುರುಲಕ್ಷ್ಮಿ—** ವಿಧಿಯಿತ್ತ ಭಾಗ್ಯವದು! ವಿಧಿಯ ಸಂಕಲ್ಪವದು!

**ರಾಧೇಯ—** ( ಜೀವನದ ಕಹಿಯೇ ಉಸುರಾಗಿ ಬಂದಂತೆ ಉದ್ರಿಕ್ತನಾಗಿ )
ದೇವತೆಗಳೆಲ್ಲರೂ ಮಾತಾಡಿಕೊಂಡಂತೆ

ಹೇಳಿ ಹಳಸಿದ ನುಡಿಯನೆಂದಿಗೂ ಹೇಳುವಿರಿ.
ವೀರಕರ್ಣನ ಬಾಳ ಕನಸಿನಲ್ಲಿಯು ಕೂಡ
ನೆನೆಯಲಾರಿರಿ ನೀವು. ಭುವನ ವಂದಿತನಾಗಿ
ಬಾಳಿಬದುಕುವ ಕಲಿಯು ಸ್ವಾರ್ಥದುರಿಯಲಿ ಬೆಂದು
ಬಾಳ ಕಹಿಯಲಿ ಮುಳುಗಿ ತಳಕಿಳಿದು ಹೋದರೂ
ಪಕ್ಷಪಾತದೊಳವನ ಕಡೆಗಣಿಸಿ ನಿಲ್ಲುವಿರಿ.
ತತ್ವವನು ಹೇಳುವಿರಿ. ಸತ್ಯಸಂಧರು ನೀವು!
ಜಗದ ಸತ್ಯತೆಯನ್ನು ಕಾವ ಬಂಟರು ನೀವು
ಬೆಳೆವ ಕರ್ಣನ ಬಾಳ ಸತ್ಯತೆಯ ನೋಡಿದಿರ?

( ಕುರುಲಕ್ಷ್ಮಿಯು ಬೆದರಿ ಕಣ್ಣರಳಿಸುವದನ್ನು ನೋಡಿ )

ಬೆದರದಿರು ಮಾತಾಯಿ! ಸತ್ಯವೆಂದಿಗು ಕಟುವು.
ಈಗಲಾದರು ಹೇಳು ಕುರುರಾಜ್ಯ ಲಕ್ಷ್ಮಿಯೇ!
ವೀರ ಕರ್ಣನಿಗಾವ ಪರಿಹಾರವಿದೆ ಹೇಳು?
ಬೆದರದಿರು! ಬೆಚ್ಚದಿರು! ಬುದ್ಧಿ ಮಂಕಾದಂತೆ
ದುರಗುಟ್ಟಿ ನೋಡದಿರು! ಹೇಳೆನ್ನ ಮಾತಾಯಿ!
ಜನುಮದುದ್ದಕು ಬಂದ ಶಾಪವನು ಹೊತ್ತಿರುವ
ವೀರ ಕರ್ಣನಿಗಾವ ಪರಿಹಾರವಿದೆ ಹೇಳು!
ಹೇಳೆನ್ನ ಹಡೆದಮ್ಮ! ನನಗಾವ ಪರಿಹಾರ............

ಕುರುಲಕ್ಷ್ಮಿ— ( ರಾಧೇಯನ ಕಣ್ತಪ್ಪಿಸುತ್ತ ಪ್ರಕೃತ ಸಂದರ್ಭವನ್ನೇ ಮರೆತಂತೆ ಮಾತು ತಪ್ಪಿಸಿ )

ರಣವ ರಚಿಸಿದ ನೀನು ಸಮರ ಭೈರವಿಗಾವ
ಶಾಂತಿಯನು ಕೊಡಬಲ್ಲಿ ಹೇಳುಮಿಯು ಕರ್ಣದೊರೆ.
ವೀರ ನೆತ್ತರಕಾಗಿ ಹಸಿದು ನಿಂತಿಹಳವಳು.

ರಾಧೇಯ— ( ಇಬ್ಬಾಯ ಖಡ್ಗವನು ತುಡುಕಿದವನಂತೆ ಸಿಡಿದೆದ್ದು )

ಸಮರ ಭೈರವಿಗಾನು ಶಾಂತಿಯನು ತರಬಲ್ಲೆ
ಕೇಳೆನ್ನ ಕುರುದೇವಿ! ಬಹುಜೀವಹರಣದೊಳು

ನೆತ್ತರೋಕುಳಿಯಾಡಿ ಶತಕೋಟಿ ಸಂಖ್ಯೆಯೊಳು
ರುಂಡಗಳನೀಡಾಡಿ ದಿಗ್ಬಲಿಯನೆಸೆಯುವೆನು.
ವೀರ ದುರ್ಯೋಧನನ ರಿಣವ ತೀರಿಸಲೆಂದು
ನೆತ್ತರದ ಮುಡುಪಿಟ್ಟು ಧನ್ಯನೇ ಆಗುವೆನು.
ಕರಿತುರಗ ರಥ ಪತ್ತಿ........ ಕಾಲಾಳುಗಳನೆಲ್ಲ........

**ಕುರುದೇವಿ**— ( ಹೌಹಾರಿ. ದೊಡ್ಡ ದನಿಯಲ್ಲಿ )
ಕೊಲೆಗಡಕತನವಿದುವು ಜೀವಿಗಳ ಸಂಹಾರ !
ನಿನಗಾವ ಮರುಳಯ್ಯ !

**ರಾಧೇಯ**— ( ಕಹಿಯಾಗಿ ) ಮರುಳಲ್ಲ ತಾಯಮ್ಮ !
ಇದುವು ಕೂಡಾ ನಿಮ್ಮ ವಿಧಿಯಿತ್ತ ಸಂಕೇತ.
ಸಂಕಲ್ಪ ಸಿದ್ಧಿಯಿದು ಸುಮ್ಮನೇ ಕೇಳಮ್ಮ !
ಆತ್ಮ ಘಾತುಕನಾಗಿ ಮರಣವನ್ನಪ್ಪುವುದು
ಇನ್ನೆನಗೆ ಬೇಕಿಲ್ಲ. ರಣದ ಮಧ್ಯದೊಳಾನು
ಭೈರವಾಡಂಬರದಿ ಕಲಿತನವ ತೋರಿಸುತ
ಬಾಳಕಹಿಯಲಿ ಮಿಂದು ನಂಜೇರಿ ನಿಂತಿರುವ
ದೇಹವನ್ನಲ್ಲಿಯೇ ಈಡಾಡಿ ಬಿಸುಟುವೆನು.
ವೀರ ನೆತ್ತರಕಾಗಿ ಹಸಿದು ನಿಂತಿಹ ತಾಯಿ
ರಣ ಚಂಡಿಗೆನ್ನೆದೆಯ ನೆತ್ತರವನುಣಬಡಿಸಿ
ನಿಶ್ಚಿಂತನಾಗುವೆನು. ಹೋಗೇಳು ತಾಯಮ್ಮ !
ಕಣ್ಣೀರು ತೋರದಿರು !

**ಕುರುದೇವಿ**— ( ತನ್ನಲ್ಲಿ ) ದೈವಹತನಾಗಿರುವ
ಕುರುಪತಿಯ ರಾಜ್ಯದಲಿ........ ಎನಗಿನ್ನು........
[ಮಾತು ಮುಗಿಸದೇ ಮೌನವಾಗಿ ನಿಂತು ಕೊನೆಗೊಮ್ಮೆ . . . . . . . . . ( ಹೊರಗೆ )
ಇಂದು ನೀನೂ ಕೂಡಾ........

**ರಾಧೇಯ**— ( ವಿಕಟವಾಗಿ ನಕ್ಕು ) ಜಯವು ಕುರುದೊರೆಗಿರಲಿ
ಹೋಗಿ ಬಾ ತಾಯಮ್ಮ !

( ಎನ್ನುತ್ತ ರಾಧೇಯನು ಕೈಯೊಳಗಿನ ಚೂರಿಯನ್ನು ರೊಪ್ಪನೆ ನೆಲಕ್ಕೆಸೆದು ಬಿಡುವನು. ಕುರುಲಕ್ಷ್ಮಿ ಅಂತರ್ಧಾನಳಾಗುವಳು. ಮತ್ತೆ ಬಿರುಗಾಳಿ ಜೋರಿನಿಂದ ಬೀಸತೊಡಗುವದು. ಗುಡುಗಾಡುವದು. ಮಿಂಚು ತೋರುವದು. ಆ ತೀಕ್ಷ್ಣ ಬೆಳಕಿಗೂ, ಗುಡುಗಿನ ಸಪ್ಪಳಕ್ಕೂ ತತ್ತರಿಸಿದ ತೆರೆಯು ಸರಸರನೆ ಬೀಳುವದು.

— ತೆರೆ —

# ದೃಶ್ಯ ಆರು

( ಮರುದಿನ ಮುಚ್ಚಂಜೆಯ ಹೊತ್ತಿನಲ್ಲಿ ವಿಷ್ಣುಭಕ್ತನು ಸಮರ ಭೂಮಿಗೆ ಸನಿಯದಲ್ಲಿರುವ ಗಿಡವಡಿಯಲ್ಲಿ ವಿವ್ಹಲನಾಗಿ ಕುಳಿತು ಹಾಡುತ್ತಿರುವನು. ಅವನ ಎರಡೂ ಕಣ್ಣುಗಳು ಒದ್ದೆಯಾಗಿರುವವು. )

ವಿಷ್ಣುಭಕ್ತ—

ಜಗವ ಕಾಯುವ ದೇವನೆಲ್ಲಿಹೆ
ಬೇಗ ಬಾರೈ ಭೂಮಿಗೆ
ಸಮರ ಶಾಂತಿಯ ತಂದು ತೋರೈ
ದಗ್ಧ ಭಾರತ ನಾಡಿಗೆ.

ಏನು ಕಾಳಗವೇನು ಕಗ್ಗೊಲೆ
ಯೆನಿತು ಭೀಕರವಾಗಿದೆ.
ರಾಸಿ ಹೆಣಗಳ ಬಣವೆ ನೆತ್ತರ
ಹೊಳೆಯು ಕಕ್ಕಿಸಿ ನಿಂತಿದೆ.

ಸಾವು ನೋವಿನ ಲೆಕ್ಕವಿಲ್ಲದೆ
ಜೀವ ತಳಮಳಗೊಂಡಿದೆ.
ತರಿವ ಕೈಯೊಳು ಸಿಕ್ಕ ಜೀವವು
ಕಾಲು ಕಸವೇ ಆಗಿದೆ.

ಯಾವ ಹುಚ್ಚಿನೊಳಾವ ಭ್ರಾಂತಿಯು
ವೀರ ಕರ್ಣನಿಗಾಯಿತು;
ಕೋಟಿ ತಲೆಗಳ ಕೆಡಹಿ ನಿಂತರು
ದಾಹವಾರದೆ ಹೋಯಿತು.

ವೀರ ಕೌರವರಾಯ ದಳದೊಳ-
ಗಸಮ ಬಲ ವಿಖ್ಯಾತನು.
ರಣವ ನೋಡುತ ನಿಂತ ಸೈನ್ಯವ
ತಿಂದು ಖ್ಯಾತಿಯ ಕೊಂದನು.

ತೋಳ ಕುರಿಗಳ ತಿಂಬ ಪರಿಯೇ
ವೀರ ಕರ್ಣನಿಗಾಯಿತು.
ಯಾವ ಶೌರ್ಯವಿದಾವ ಧೈರ್ಯವು
ಬರಿಯ ಹಿಂಸೆಯ ಕತೆಯಿದು.

ಕೊಂದು ತಿಂಬನು ಕೊಲ್ಲುತಿರುವನು
ಲೆಕ್ಕವಿಲ್ಲದ ಜನಗಳ;
ಜೀವ ರಕ್ಷಕನೆಲ್ಲಿಯವಿತಿಹೆ
ಬಂದು ಬಿಡಿಸೀ ಹಿಂಸೆಯ.

ತಂದೆ ಬಾರೈ! ಶರಣವತ್ಸಲ
ನಮಿತ ಕರುಣಾ ಸಿಂಧುವೆ.
ನೀಡು ಶಾಂತಿಯ ಸಮರಮುಕ್ತಿಯ
ಜಗದ ಆಪದ್ಬಂಧುವೆ.

(ಕಣ್ಣು ಹನಿಗಳನ್ನು ತೊಡೆದುಕೊಂಡು ಏಳುವಹೊತ್ತಿಗೆ, ಹೃದಯದಲ್ಲಿದ್ದ ಭಾವಗಳ ತಾಕಲಾಟಕ್ಕೆ ಸಿಕ್ಕ ಜರಾಜರ್ಜರಿತವಾದ ದೇಹವನ್ನು ತೂರಿಕೊಂಡು ಕುಂತೀದೇವಿಯು ಪ್ರವೇಶಿಸುತ್ತಾಳೆ. ದಾರಿಯ ದಣಿವಿನಿಂದ ಸೋತದೇಹವು ಕಂಪಾಯಮಾನವಾಗಿದೆ. ಬಂದವಳು ಕುಂತಿದೇವಿಯೆಂಬುದನ್ನು ಗುರುತಿಸಿದ........)

ವಿಷ್ಣುಭಕ್ತ— (ಅಚ್ಚರಿಯಿಂದ) ತಾಯಿ ಕುಂತೀದೇವಿ!
ನೀನಿಲ್ಲಿಗೇಕಮ್ಮ! ರಣದಂಚಿನೊಳಗಾವ
ಕಜ್ಜವಿಹುದೆಲೆ ತಾಯೆ! ಮೂರುದಿನಗಳ ಕಾಲ
ಮುಚ್ಚಂಜೆ ಹೊತ್ತಿನೊಳು ಘೋರೆಂದು ಬಿರುಗಾಳಿ
ಜಗವನೇ ಮುರಿವಂತೆ ಹುಚ್ಚೆದ್ದು ಬೀಸುತಿದೆ.
ಗಾಳಿಸುಳಿಯಲಿ ಸಿಕ್ಕು ತೂರಿ ಹೋಗುವ ಮೊದಲೆ
ಲೇಸಿನಾಸರಹೊಂದಿ ಸುಖಿಯಾಗು ತಾಯಮ್ಮ!
ನನ್ನೊಡನೆ ಬಾ ತಾಯಿ.

ಕುಂತೀದೇವಿ— [ಬೆವರನ್ನು ಚೆಲ್ಲಿ] ನನ್ನೆದೆಯ ತುಂಬಿರುವ
ಬಿರುಗಾಳಿಗಿಂತಲೂ ಶಕ್ತಿಯುತವಾಗಿಲ್ಲ-

ಏ ಗಾಳಿ ದಾಸಯ್ಯ ! ನನಗಾಗಿ ಬೇಯದಿರು.
ಕರ್ಣ ಪಾಳೆಯದತ್ತ ಕೊಂಡೊಯ್ವ ದಾರಿಯನು
ಬಲ್ಲೆಯಾದೊಡೆ ಹೇಳು.

ವಿಷ್ಣುಭಕ್ತ— [ ಬೆಕ್ಕಸ ಬೆರಗಾಗಿ ] ಹೆಣ್ಣು ಹೃದಯವ ಹೊತ್ತು
ಕರ್ಣ ಪಾಳೆಯದತ್ತ ಹೋಗುವುದು ಸಾಧ್ಯವೇ ?
ಕರ್ಣ ಮಾನವನಾಗಿ ಬದುಕಿ ಬಾಳುವದಿಲ್ಲ.
ಪ್ರತ್ಯಕ್ಷ ಯಮನವನು. ಸಮರ ಭ್ರಾಂತನು ಕರ್ಣ,
ರಣ ಪಿಶಾಚಿಯೆ ಅವನು. ಮತಿಗೆಟ್ಟು ನಿಂತಿರುವ
ಕಾಳ ರಕ್ಕಸನವನು. ಹೋಗದಿರು........ ತಾಯೀ........

ಕುಂತೀದೇವಿ— [ ಅವನನ್ನು ಹೆಚ್ಚು ಮಾತಾಡಗೊಡದೆ ]
ಹೊತ್ತು ಮುಳುಗುವ ಮೊದಲೆ ನಾನವನ ಕಂಡೊಮ್ಮೆ
ಮಾತನಾಡಲುಬೇಕು. ದಾರಿಯನು ಬಲ್ಲವೊಡೆ
ದಯವಿಟ್ಟು ತೋರಯ್ಯ !

ವಿಷ್ಣುಭಕ್ತ— [ ಪ್ರತಿಭಟಿಸುವಂತೆ ] ವಿಷ್ಣುಭಕ್ತನ ಮಾತು
ಬರಿಯ ಬುರುಗಾಗಿಲ್ಲ. ನಿಜವನರಿಯೇ ತಾಯಿ !
ಘೋರ ಪಾತಕಿಯವನು, ವೈಮರೆತ ರಾಕ್ಷಸನು.

ಕುಂತೀದೇವಿ— [ ಕಳವಳದ ಮುಖದಲ್ಲಿ ಸಾವಧಾನವನ್ನು ತೋರುತ ]
ಕಾಳೆಗದ ಮಾತಿದುವು ಸುಮ್ಮನಿರು ದಾಸಯ್ಯ !
ಕ್ಷಾತ್ರವೃತ್ತಿಗೆ ಬಂದ ಪ್ರತ್ಯಕ್ಷ ಶಾಪವಿದು.
ಕಗ್ಗೊಲೆಯ ರೀತಿಯಿದು.

ವಿಷ್ಣುಭಕ್ತ— [ ತಪ್ತನಾಗಿ ] ಗಂಡುಗಲಿಗಳ ಕೆಣಕಿ
ಗಂಡೆದೆಯ ತೋರುವುದು ಕ್ಷಾತ್ರ ತೇಜವು ತಾಯಿ !
ಬರಿಯ ನೆತ್ತರಿಗಾಗಿ ನೆತ್ತರವನುಕ್ಕಿಪುದು
ಹಿರಿಯ ಸಾಹಸವಲ್ಲ; ಬಹುಘೋರ ಹಿಂಸೆಯಿದು.
ಧೀರ ವೃತ್ತಿಯ ತೊರೆದು ಶೌರ್ಯವನು ಸೆದೆದಿಕ್ಕಿ
ಕಂಡವರ ಕೊಲ್ಲುತಿಹ ಪಾಪಹಸ್ತನು ಕರ್ಣ !

**ಕುಂತೀದೇವಿ**— [ ಕಸವಿಸಿಯಿಂದ ] ಅಷ್ಟುಕಟುಕನೆ ಕರ್ಣ !

**ವಿಷ್ಣುಭಕ್ತ**— ಬಣ್ಣನೆಗೆ ಮೀರಿಹನು !

**ಕುಂತೀದೇವಿ**— [ ತನ್ನಲ್ಲಿ ] ಅವನಂತರಂಗದೊಳಗೆದ್ದ ದಾವಾನಲವು
ಜಗವನುರಿಸುವ ಮೊದಲು ನಾನವನ ಕಾಣದಿರೆ
ಅನ್ಯಾಯವಾದೀತು. ಮನದ ಕ್ಷೋಭೆಯಲವನು
ಮನವನೇ ತೂರಿಹನು. ಚಿತ್ತಸ್ವಾಸ್ಥದೊಳವನ
ಸಂತೈಸಿ ಕರೆತರಲು ಮತ್ತೊಮ್ಮೆ ಯತ್ನಿಸುವೆ.
ಸೋದರರ ತಲೆಗಾಯ್ದು ಬದುಕಿ ನೀ ಬಾಳೆಂದು
ಇನ್ನೊಮ್ಮೆ ಬಿಂಬಿಸುವೆ. [ ಹೋಗಿ ] ರಾಧೇಯನೆಲ್ಲಿಹನು
ಬೇಗನೆ ತೋರಯ್ಯ ! ನಾನವನ ತಡೆಯುವೆನು.
ತಡೆದು ಮನವೊಲಿಸುವೆನು. ಶಾಂತಿ ಭಿಕ್ಷೆಯ ಬೇಡಿ
ರಣವನೇ ನಿಲ್ಲಿಸುವೆ. ಬೇಗ ನಡೆ ದಾಸಯ್ಯ !

**ವಿಷ್ಣುಭಕ್ತ**— ಮತಿಭ್ರಾಂತನಾದವನಿಗೆಲ್ಲಿ ಶಾಂತಿಯು ತಾಯಿ !

**ಕುಂತೀದೇವಿ**— ನಾನದನು ಕಾಣುವೆನು. ದಯೆದೋರಿ ನಡೆಯಯ್ಯ.

[ ಗಾಳಿ ಭೋರೆಂದು ಬೀಸತೊಡಗುವದು. ಆ ಗಾಳಿಗೆ ಹೆದರಿದ ಅನೇಕ ದನಿಗಳು ತೆರೆಯಲ್ಲಿ ತೂರಿಬರುವವು. ]

**ವಿಷ್ಣುಭಕ್ತ**— [ ಗಾಬರಿಯಿಂದ ] ಕರ್ಣನೆದೆಯೊಳಗೆದ್ದ ಭೀಕರದ ಗಾಳಿಯೇ
ಬಿರುಗಾಳಿಯಾದಂತೆ ಬೀಸತೊಡಗಿತು ಮತ್ತೆ.
ನೀನತ್ತ ಹೋಗದಿರು. ಘೋರ ಗಂಡಾಂತರದಿ
ನೀನಾಗಿ ಬೀಳದಿರು. ವಿಷ್ಣುಭಕ್ತನ........

**ಕುಂತೀದೇವಿ**— [ ತಡೆದು ] ನಿನಗೆನ್ನ ಕೊರಳಾಣೆ. ದಾರಿತೋರಿಸು ತಂದೆ !
ಮಗನ ಕಾಣುವ ಮೊದಲು ಮಡಿದು ಹೋಗುವ ಪಾಪ
ಬೇಡೆನಗೆ ದಾಸಯ್ಯ ! ಬೇಗ ನಡಿ ! ಬೇಗ ನಡಿ !

**ವಿಷ್ಣುಭಕ್ತ**— ವಿಷ್ಣುಭಕ್ತಳ ಮಗನು ರಾಧೇಯನೆಂಬೆಯಾ ?
ಅಚ್ಚರಿಯೊಳಚ್ಚರಿಯು.

**ಕುಂತೀದೇವಿ—** [ ಆತುರದಿಂದ ] ಸೋಜಿಗದ ಮಾತಿರಲಿ
ಮುಂದಾಗು ಭಕ್ತವರ !

**ವಿಷ್ಣುಭಕ್ತ—** [ ಅಸಹಾಯನಾಗಿ ] ವಿಷ್ಣುಭಕ್ತಳಿಗಾಗಿ........

**ಕುಂತೀದೇವಿ—** ........ ದಾರಿಯನು ತೋರಯ್ಯ ! ........

**ವಿಷ್ಣುಭಕ್ತ—** ನಿನ್ನ ಧೈರ್ಯವೆ ಧೈರ್ಯ ! ಹೀಗೆ ಬಾ !
ಹೀಗೆ ಬಾ........ಮಾತಾಯಿ !

**ಕುಂತೀದೇವಿ—** [ ಹೋಗ ಹೋಗುತ್ತ ]
ವಿಧಿವಿಲಾಸದ ಸುಳಿಯ ಸುತ್ತಿನಲಿ ಸಿಕ್ಕಿರುವ
ಪಾಂಡವರನೆಡೆಬಿಡದೆ ಕಾಯುತಿಹ ಪರಮಾತ್ಮ !
ನೀನೆನ್ನ ನೆರವಾಗು. ನಾನಾಪ ಧೈರ್ಯದಲಿ
ಕಂಡೆನ್ನ ಕಂದನನು ಬೇಡಿಕೊಳ್ಳಲಿ ತಾಯಿ !
ಇಂದೆನ್ನ ಹೃದಯವೇ ಕುಸಿಬಿದ್ದು ಹೋಗಿಹುದು.
ಹದಗೆಟ್ಟ ಹೃದಯದಲಿ ಜೀವದುಸಿರನು ತುಂಬಿ
ಚೈತನ್ಯವೀಯುತಿಹ ದೇವದೇವನೆ ತಂದೆ !
ನನ್ನಳಲು ನಿನ್ನದಿದೆ. ನಿನಗೆನ್ನ ಅರಿಕೆಯಿದೆ.
ಕಾಪಾಡು ಪರಮಾತ್ಮ !

[ ಎಂದು ಕೈಮುಗಿದು ಕುಂತೀದೇವಿ ಸಾಗುವ ಹೊತ್ತಿಗೆ ಬಿರುಗಾಳಿ ಇನ್ನೂ ಜೋರಿನಿಂದ ಬೀಸತೊಡಗುವದು ಆ ಬಿರುಗಾಳಿಗೆ ಸಿಕ್ಕು ತತ್ತರಿಸುವಂತೆ ತೆರೆಯು ತಡೆ ತಡೆದು ಸರ ಸರನೆ ಬೀಳುವದು. ]

— ತೆರೆ —

## ದೃಶ್ಯ ಏಳು

[ ತೆರೆ ಏಳುತ್ತಲೇ ಗಾಳಿಯ ಸುಳಿಯಲ್ಲಿ ಸಿಕ್ಕು ದಾರಿಕಾಣದವಳಂತೆ ಹೌಹಾರಿ ನಿಂತ ಅಂಗಮಾತೆಯು ಗೋಚರಿಸುವಳು. ಸೂಕ್ಷ್ಮ ಪರಿಸ್ಥಿತಿಯ ಅರಿವಾಗಿ ಮನೋವೇದನೆಯನ್ನು ಸಹಿಸುತ್ತಿರುವ ಭಾವವು ಅವಳ ಮುಖದಲ್ಲಿ ಎದ್ದು ಕಾಣುವದು. ಒಂದು ದೃಢ ನಿರ್ಧಾರದಿಂದ ಸಾಗಿರುವ ಅವಳಿಗೆ ಈ ಗಾಳಿಯ ತೊಡಕು ಅಸಹನೀಯವಾದಂತೆ ]

**ಅಂಗಮಾತೆ**— ಭರದಿ ಬೀಸುವ ಗಾಳಿ ! ಚಣಕಾಲವಾದರೂ
ತಡೆಯಲಾರೆಯ ನೀನು ! ಕೊಳಗುಳದೊಳೆಲ್ಲಿಯೂ
ಕರ್ಣ ದ್ರೋಹದ ಧೂಳವಿಡಿಕಿರಿದು ಮುಸುಕುವೊಡೆ
ಸರ್ವನಾಶವು ಸಿದ್ಧ. ಕೌರವನ ಕಾಳೆಗದ
ವೀರ ನಾಡಿಯು ಕರ್ಣನೀ ಪರಿಯ ಮೋಸದೊಳು
ಹತವೀರ್ಯನಾಗುವೊಡೆ ದೊರೆಗೆ ಸೋಲೇ ಸಿದ್ಧ.
ಸಾಕಿ ಸಲುಹಿದ ದೊರೆಯೊಳೀ ಪರಿಯ ಮೋಸವೇ ?
ಮೀಂಗುಲಿಗ ಧರ್ಮದೊಳು ವಿಪರೀತ ಭಾವವೇ ?
ಬಾಳ ಸಾರ್ಥಕವಿಂದು ಸ್ವಾಮಿಕಾರ್ಯದೊಳಿರಲು
ಬಾಳ ಸೂಕ್ಷ್ಮತೆಯಲ್ಲಿ ಧೃತಿಗೆಟ್ಟು ನಿಲ್ಲುವುದೆ ?
ಶ್ರೀ ಕೃಷ್ಣನಿತ್ತಿರುವ ಘೋರ ಹಾಲಾಹಲವ
ಕುಡಿದು ನಂಜೇರುವುದೆ ? ಪರಮಾತ್ಮನೆಂಬವನು
ಪಾಂಡವರಿಗಾಗಿಹನು. ಪಕ್ಷಪಾತದೊಳವನು
ಭೇದದಲಿ ಹೊಕ್ಕಿರಿದು ಕರ್ಣನೆದೆಯನು ಸೀಳಿ
ಕೌರವನ ಕೊಂದಿಹನು. ಮಾತು ತಿಳಿಯದ ಕಂದ
ಖ್ಯಾತಿಯನು ಸುಡುತಿಹನು. ಕೇಡಾಳಿಯಾಗುತ್ತ
ಸುಮ್ಮನೇ ಕೆಡುತಿಹನು. ವೀರ ಕರ್ಣನ ಖ್ಯಾತಿ
ಸುಡು ಬುಗ್ಗೆಯಂಚಿನಲಿ ಸುಟ್ಟು ಹೋಗವ ಮುನ್ನ
ನಾನವನ ಕಾಣುವೆನು. ಎಚ್ಚರವನೀಯುವೆನು.
ಬಾಳ ಮಾತನ್ನುಳಿದು ಚಲವನೇ ಹಿಡಿಯೆಂಬ
ಧರ್ಮವನು ಬೋಧಿಪೆನು. ಬೀಸದಿರು ಬಿರುಗಾಳಿ !

ಬೀಸಿ ದಾರಿಯೊಳೆನ್ನ ಕಂಗೆಡಿಸಿ ನಿಲ್ಲದಿರು.
ಕರ್ಣನೆದೆಯೊಳಗೆದ್ದ ವಿಷದುಸಿರ ಸೂಸದಿರು.
ಚಣಕಾಲವಾದರೂ ನಿಲ್ಲೊಮ್ಮೆ ಬಿರುಗಾಳಿ !
ನಿಂತುಬಿಡು ಬಿರುಗಾಳೀ s s s ........

( ಎನ್ನುತ್ತ ಅಂಗಮಾತೆಯು ನಿರ್ಧಾರದ ಹೆಜ್ಜೆಗಳನ್ನು ಮುಂದಿಡುತ್ತಿರುವಾಗ ವಿಷ್ಣುಭಕ್ತನು ಕುಂತೀದೇವಿಯೊಡನೆ ಪ್ರವೇಶಿಸುವನು. ಆ ಆಕೃತಿಗಳನ್ನು ಕಂಡ ಅಂಗಮಾತೆಯು ಆಶಾಪೂರ್ಣಳಾಗಿ )

ಬಿರುಗಾಳಿಯೊಡಲಿಂದ ತೂರಿ ಬಂದವರಂತೆ
ಬಂದು ನಿಂತಿಹರಾರು ? ಯಾರು ಕಾಣುವಿರಲ್ಲಿ
ನಿಲ್ಲುವಿರ ದಯವಿಟ್ಟು. ಕರ್ಣ ಪಾಳಿಯದತ್ತ
ಕೊಂಡೊಯ್ಯಲಾರಿರಾ ? ಸುಟ್ಟ ಗಾಳಿಯೊಳೆನ್ನ
ದಾರಿಯೇ ತಪ್ಪಿಹುದು. ದಯದೋರಲಾರಿರಾ ?

**ವಿಷ್ಣುಭಕ್ತ**— ( ಓಡಿಬಂದು ) ಕರ್ಣ ಪಾಳಿಯದಲ್ಲಿ ನಿನಗಾವ ಕೆಲಸವಿದೆ ?
ಸುತ್ತಿ ಸುಳಿಯುವ ಗಾಳಿ ದೇಹವನು ಕೊಚ್ಚೀತು.
ನೀನಿತ್ತ ಬಾ ತಾಯಿ ! ಲೇಸಿನಾಸರವಿಲ್ಲಿ.

**ಅಂಗಮಾತೆ**— ದಯೆಯ ತೋರುವ ದೈವ ಪ್ರತ್ಯಕ್ಷ ಬಂದಂತೆ
ಬಂದಿರುವ ಬಂಧುವೇ ! ಕರ್ಣಪಾಳಿಯಕೆನ್ನ
ಕೊಂಡೊಯ್ವ ಪುಣ್ಯವೇ ನಿನ್ನದಾಗಲಿ ತಂದೆ !

**ಕುಂತೀದೇವಿ** —[ಮುಂದೆಬಂದು] ಕರ್ಣನಿರುವೆಡೆಯಲ್ಲಿ ನಿನಗಾವ ಕಾರ್ಯವಿದೆ
ಹೇಳಬಹುದೇ ತಂಗಿ ! ಸಮರ ಭ್ರಾಂತಿಯೊಳವನು
ಮತಿಭ್ರಾಂತನಿಹನಂತೆ ! ಪ್ರಾಣಹಿಂಸೆಯೊಳವನು
ತೇಲಿ ಮುಳುಗಿಹನಂತೆ !

**ಅಂಗಮಾತೆ**— ( ನೋವಿನಿಂದ ) ಹಿರಿಯ ಜೀವನದಲ್ಲಿ
ಗುರಿಯು ತಲೆ ಕೆಳಗಾಗೆ ಜೀವನದ ರೋಷದುರಿ
ಹುಚ್ಚೆದ್ದು ಸಿಡಿಯುವುದು ಪ್ರಕೃತಿ ಸಿದ್ಧವು ತಾಯಿ !

**ಕುಂತೀದೇವಿ**— ಗುರಿಯ ಸಾಧನೆಯಲ್ಲಿ ನಿಸ್ಸೀಮನಾದವನ........

**ಅಂಗಮಾತೆ**— ವೀರ ಜೀವನದಲ್ಲಿ ಕಸರು ಬಂದಿದೆ ತಾಯಿ !
ವಿಧಿಯ ಕೈವಾಡವೇ ಕಹಿಯ ತಂದಿದೆ ನೋಡು.

**ಕುಂತೀದೇವಿ**— ಅರ್ಥವಾಗದ ಮಾತು. ವೀರ ಕರ್ಣನ ಬಾಳು
ಜಾಜ್ವಲ್ಯವಾಗಿಹುದು ಸತ್ಯವಾಗಿದೆ ತಂಗಿ !

**ಅಂಗಮಾತೆ**— (ಉದ್ವೇಗದಿಂದ) ಆ ಮಾತು ನಿಜವಿತ್ತು. ಸ್ವಾಮಿನಿಷ್ಠೆಯೊಳವನ
ಬಾಳಸೊಗ ತುಂಬಿತ್ತು. ಇಂದವನ ನಿಷ್ಠೆಯೇ
ತತ್ತರಿಸಿ ನಿಂತಿರಲು ತಾಳಲಾಗದ ತಾಯಿ
ಮಗನ ತಿದ್ದಲಿಕೆಂದು ಓಡಿ ಬಂದಿಹನೆಮ್ಮ !
ಮೀಂಗುಲಿಗ ಧರ್ಮವನು ಕಾಯ ಬೇಡವೆ ತಾಯಿ !

**ಕುಂತೀದೇವಿ**— ( ಅವಳನ್ನು ನೇರವಾಗಿ ನೋಡುತ್ತ ಆಶ್ಚರ್ಯದಿಂದ )
ರಾಧೇಯನೆಂಬವನ ಸಾಕಿ ಸಲುಹಿದ ತಾಯಿ !
ಮೀಂಗುಲಿಗನವನಲ್ಲ; ವೀರ ಕ್ಷತ್ರಿಯನವನು.
ನೀನತ್ತ ಹೋಗದಿರು. ಹೋಗಿ ಕಾಳೆಗಕವನ
ಸನ್ನದ್ಧ ಮಾಡದಿರು.

**ಅಂಗಮಾತೆ**— ಸ್ವಾಮಿನಿಷ್ಠೆಯು ಕೂಡ ಕ್ಷಾತ್ರವೃತ್ತಿಯು ತಾಯಿ !
ದ್ರೋಹಮುರಿಯೊಳು ಬಿದ್ದು ಸುರಿದು ಹೋಗುವ ಮುನ್ನ
ತಾಯಿಯಾದವಳಾನು ಕಾಣಲಾಗದೆ ಮಗನ ?
ಏನು ಹೇಳುವೆಯಮ್ಮ ?

**ಕುಂತೀದೇವಿ**— ( ಅವಳ ಕೈಗಳನ್ನು ಹಿಡಿದು ) ನಿನ್ನ ಮಗನಾದವನು
ಸ್ವಾಮಿಯೇ ಇರುವಾಗ ಸ್ವಾಮಿನಿಷ್ಠೆಯ ಮಾತು
ಬರಬಹುದೆ ಹೇಳೆಮ್ಮ.

**ಅಂಗಮಾತೆ**— ( ಸಿಡಿದೇಳುವಂತೆ ) ಮಾಯಾವಿ ನೀನಾರು ?
ಕೌರವನ ರಾಜ್ಯದಲಿ ದ್ರೋಹಮುರಿಯೆಬ್ಬಿಸುವ

ವಂಚಕಳು ನೀನಾರು? ದೂರವಿರು ನಡೆಯುತ್ತ
ನನ್ನ ದಾರಿಯು ನನಗೆ. (ಕೊಸರಿ ಕೊಳ್ಳುವಳು)

**ಕುಂತೀದೇವಿ**— [ಸಮಾಧಾನದಿಂದ] ಮಾಯಾವಿ ನಾನಲ್ಲ,
ದುಷ್ಟಾತ್ಮಳಾನಲ್ಲ. ನಿನ್ನ ಮಗನಾದವನು
ನನ್ನ ಮಗನಿಹನಮ್ಮ! ಪಾಂಡುಪುತ್ರರ ತಾಯಿ
ಕರ್ಣನಿಗು ನಿಜಮಾತೆ.

**ಅಂಗಮಾತೆ**— (ಬೇಗಾಗಿ) ರಾಧೇಯನಾದವನು........

**ಕುಂತೀದೇವಿ**— (ಮುಖತಗ್ಗಿಸಿ) ಕುಂತಿಯಮಗನು ನಿಜವು.

**ಅಂಗಮಾತೆ**— (ಹೌಹಾರಿದಂತೆ) ಕರುಳ ಜಲಕೆಸೆದವಳು........

**ಕುಂತೀದೇವಿ**— (ಉಬ್ಬಸದಿಂದ) ಕರ್ಣನಿಗೆ ನಲ್ತಾಯಿ

**ಅಂಗಮಾತೆ**— (ಸಂಕಟದಿಂದ) ಸತ್ಯವನು ಬಚ್ಚಿಟ್ಟು
ಮಗನ ಕೊಂದಿರಿ ನೀವು; ಸತ್ತ ಬಳಿಕೂ ಮಗನ
ಖ್ಯಾತಿಯನು ಹೂಳಿಡಲು ಮತ್ತೆ ಬಂದಿರಿ ನೀವು.

**ಕುಂತೀದೇವಿ**— (ಈ ಮಾತುಗಳ ಬರೆಗಳನ್ನೂ ಅಲಕ್ಷ್ಯ ಮಾಡಿ)
ದೈವದಾಟವು ತಂಗಿ! ನೀನದನು ಬೆದಕದಿರು!

**ಅಂಗಮಾತೆ**— (ಕಣ್ಣೀರು ತುಂಬಿ ಘೋರ ನಿಟ್ಟುಸಿರನ್ನು ಬಿಟ್ಟು)
ವೀರ ಕರ್ಣನ ತಾಯಿ!

**ಕುಂತೀದೇವಿ**— (ಗದ್ಗದಿತಳಾಗಿ) ನನ್ನ ಮಗನವನಲ್ಲ
ನಿನ್ನ ಮಗನೇ ತಾಯಿ! ಅದಕಾಗಿ........

**ಅಂಗಮಾತೆ**— (ವ್ಯಥೆಯಿಂದ) ಹುಟ್ಟು ಬಂಜೆಯು ನಾನು, ಘನವೆತ್ತ
ತಾಯಿಯೇ ತಾಯಿ ಕುಂತೀದೇವಿ.

**ಕುಂತೀದೇವಿ**— (ವ್ಯಂಗವನ್ನು ಸಹಿಸುತ್ತ) ತಾಯಿ ಕುಂತಿಯು ನಿನಗೆ
ಶಿರೆಗೊಡ್ಡಿ ಬೇಡುವಳು. ನೀನವನ ಮನವೊಲಿಸಿ
ಸಂತೈಸಬೇಕಮ್ಮ! ಅವನಿಗಿದೆ ರಾಜ್ಯಸಿರಿ
ನಾಡಿಗದು ಭಾಗ್ಯಸಿರಿ. ಮಾತು ಮಿಂಚುವ ಮೊದಲು
ಕಾರ್ಯವನ್ನೆಸಗೋಣ. ಕಂದನನು ಪಡೆಯೋಣ.

ಮಗನ ತಲೆಗಾಯುವುದು ತಾಯಿಯಾದವರೆಮ್ಮ
ಕರ್ತವ್ಯವಾಗಿಹುದು. ಬೇಗೇಳು ತಂಗಿ!

( **ಅವಳನ್ನು ಒತ್ತಾಯದಿಂದ ಎಳೆಯುವ ಹೊತ್ತಿಗೆ ಬಿರುಗಾಳಿ ಭೋರೆಂದು ಬೀಸ ತೊಡಗುವದು. ತೆರೆಯಲ್ಲಿ ರಣವಾದ್ಯಗಳು ಕರ್ಣ ಕರ್ಕಶವಾಗಿ ಮೊಳಗತೊಡಗುವವು** )

ಮೊಳಗ ತೊಡಗಿವೆ ವಾದ್ಯ ಭೋರೆಂದು ರಣವಾದ್ಯ.
ಬೇಗನೇ ನಡೆ ತಂಗಿ! ಪಾರ್ಥನೊಡನಿಂದೆಯೇ
ಕೊನೆಯ ಕಾಳಗವಂತೆ! ಹಿರಿಯ ಸೋದರನೊಬ್ಬ;
ಕಿರಿಯ ತಮ್ಮನದೊಬ್ಬ. ಒಡಹುಟ್ಟಿದವರಿವರು
ಘೋರ ಕಾಳಗವೆಸಗಿ ಇರಿದು ಕೊಲ್ಲುತಲಿರಲು
ತಾಯಿಯಾದವಳೆಂತು ನೋಡಿ ಸಹಿಸುವಳಮ್ಮ!

**ಅಂಗಮಾತೆ**— ( ಒಮ್ಮೆಲೆ ವಿಚಾರಿಸುವಂತೆ )

ಪಾರ್ಥ ಸೋದರನೆಂದು ರಾಧೇಯನರಿತಿಹನೆ ?
ಹೇಳು ಕುಂತೀದೇವಿ! ಬೇಗನೇ ಹೇಳಿದನು.

**ಕುಂತೀದೇವಿ**— ( ವ್ಯಮರೆತು )

ಅರಿತರೂ ಮರೆತಂತೆ ತೋರುತಿದೆ ನೋಡಮ್ಮ!
ತಾನಿತ್ತ ವಚನವನು ತಾನಾಗಿ ಕಡೆಗಣಿಸಿ
ಪಾರ್ಥಪರಿವಾರವನು ಕೊಚ್ಚಿ ಕೊಲ್ಲುತಲಿಹನು.
ತಾಯಿಗಿತ್ತಿಹ ವಚನವೆಲ್ಲಿಯಡಗಿತೊ ಕಾಣೆ
ಸಮರದೊಳು ಪಾರ್ಥನನು . . . . . .

**ಅಂಗಮಾತೆ**— (ಹತಾಶಳಾಗಿ) ಅರ್ಥವಾಯಿತು ನನಗೆ.

ಕರ್ಣನೆದೆಯೊಳಗೆದ್ದ ಕಿಚ್ಚಿನರ್ಥವು ನನಗೆ
ಸ್ಪಷ್ಟವಾಯಿತು ನೋಡು. ಅವನ ಹುಚ್ಚಿಗೆ ಮೂಲ
ತಾಯಿಗಿತ್ತಿಹ ವಚನ. ಅವನ ಶೌರ್ಯಕೆ ಶೂಲ
ವಾಗಿಹುದು ಕುಲಮೂಲ.

**ಕುಂತೀದೇವಿ**— ಸತ್ಯವೆಂದಿಗು ಸತ್ಯ.

**ಅಂಗಮಾತೆ**— ಆ ಸತ್ಯಕಾಗಿಯೇ ಸೋದರನ ಕೊಲಲಾರ
ದೊರೆಯನೂ ಬಿಡಲಾರ. ಕಾದ ಕುಲುಮೆಯ ತೆರನಿ
ಭುಗಿಲೆಂದು ಸೀಯುತಿದೆ ಕರ್ಣನೆದೆಯೊಳಗೆದ್ದ

ಧರ್ಮಸಂಕಟದುರಿಯು. ಕಿರಿಯ ಮಗನನ್ನುಳಿಸಿ
ಹಿರಿಯ ಮಗನನು ನೀವು . . . .

**ಕುಂತೀದೇವಿ**— ಇಬ್ಬರೂ ಪ್ರಿಯರೆನಗೆ. ಕರ್ಣನಳಿದರು ಕೇಡು.
ಪಾರ್ಥ ಬಿದ್ದರು ಕೇಡು.

**ಅಂಗಮಾತೆ**— (ಸ್ಪಷ್ಟವಾಗಿ) ಸ್ವಾರ್ಥಿಯಾದವಳಾನು
ಕರ್ಣನೇ ಪ್ರಿಯನೆನಗೆ. ನೀವೆನ್ನ ಕಂದನನು . . . .

**ಕುಂತೀದೇವಿ**— ಉಳಿಸಿಕೊಡುವೆನು ತಂಗಿ! ರನ್ನಪೀಠದ ಮೇಲೆ
ಕರ್ಣನನು ಕುಳ್ಳಿರಿಸಿ ರಾಜಮಾತೆಯ ಭಾಗ್ಯ
ವೀಯುವೆನು ನಿನಗಮ್ಮ! ಕರ್ಣನ್ನೆಸಿರಿಯೇನು
ಪಾರ್ಥನ್ನೆಸಿರಿಯೇನು. ಎಲ್ಲವೂ ನಿನ್ನದಿದೆ.
ಬೇಗನೇ ನಡೆ ತಂಗಿ!

**ಅಂಗಮಾತೆ**— (ಉಸಿರುಹಾಕಿ) ಸಾಧ್ಯವೇ ಈ ಮಾತು?
ಏನು ಹೇಳುವಿರಕ್ಕ! ಓರ್ವನಳಿವಿಲ್ಲದೇ
ಘೋರಸಂಗರವೆಂತು ಮುಗಿದೀತು ಹೇಳಮ್ಮ!
ನನ್ನ ಮಗನಾದವನ ಕಂಡು ಕೊಂದಿರಿ ನೀವು!
ಸ್ವಾರ್ಥಮೂಲದೊಳೆನ್ನ ಮುದ್ದುಸುತಕರ್ಣನನು . . . .

[ಬಿರುಗಾಳಿಯ ಅಬ್ಬರವೂ ರಣವಾದ್ಯಗಳ ಸಪ್ಪಳವೂ ಒಮ್ಮೆಲೆ ನಿಂತಂತೆ ತೆರೆಯಲ್ಲಿ ಹಾಹಾಕಾರವೇಳುವದು. ಸೈನಿಕನೊಬ್ಬನು ಉಚ್ಚ ಸ್ವರದಲ್ಲಿ—

ಪಾರ್ಥಶರಹತಿಗಿಂದು ಉರುಳಿಬಿದ್ದನು ಕರ್ಣ!
ಅಮರನಾದನು ಕರ್ಣ! ಕರ್ಣನಿಗೆ ಜಯವಿರಲಿ!

ಎಂದು ಕೂಗುವನು. ಆ ದನಿಯನ್ನು ಕೇಳಿದ ಅಂಗಮಾತೆಯು ಹುಚ್ಚಳಂತೆ ಕುಂತೀದೇವಿಯನ್ನು ಗಟ್ಟಿಯಾಗಿ ಹಿಡಿದು ಅಲುಗಿಸುತ್ತ ]

**ಅಂಗಮಾತೆ**— ನನಗೆನ್ನ ಕಂದನನು ತಂದು ತೋರುವಿರೇನು.
ಹೇಳಿ ಕುಂತೀದೇವಿ! ನನ್ನ ಮಗನವನಲ್ಲ.
ನಿನ್ನ ಮಗನವನೆಂದು ಜಂಭ ಕೊಚ್ಚುವ ನೀವು
ನನ್ನ ಮಗುವನು ಕೊಂದು ನಿಮ್ಮವನನುಳಿಸಿದಿರಿ.
ತಾಯಾಗಿ ಬಾಳಿದಿರಿ! ಹೇಳಿ! ಕುಂತೀದೇವಿ.
( ಜೋರಿನಿಂದ ಅಲುಗಿಸುತ್ತ )

ನನ್ನ ಕಂದನದೆಲ್ಲಿ? ವೀರಕರ್ಣನದೆಲ್ಲಿ?
ಮೀಂಗುಲಿಗ ಮಗನೆಲ್ಲಿ? ರಾಧೇಯನವನೆಲ್ಲಿ?
ತತ್ತರಿಸುತಿಹಿರೇಕೆ? ಪಾರ್ಥಶರಹತಿಗವನು
ಬಿದ್ದನೆಂಬಿರ ನೀವು? ಹತ್ತು ಪಾರ್ಥರ ಕೊಂದು
ತಿಂದು ತೇಗುವ ಕಲಿಯ ಕ್ಷುದ್ರ ಶರಹತಿಯೆಂತು
ಪ್ರಾಣವನು ಕೊಂಡೀತು? ಕೊಂದವನು ನರನಲ್ಲ.
ಕೊಂದವಳು ನಲ್ದಾಯಿ. ತಾಯಿ ಕುಂತೀದೇವಿ.
ಹಾ ಕಂದಾ! ಹಾ! ವತ್ಸಾ!

[ ಎನ್ನುತ್ತ ಅಂಗಮಾತೆಯು ಚಟ್ಟನೇ ಚೀರಿ ದಿಙ್ಮೂಢಳಾದವಳಂತೆ ಸುತ್ತಲೂ ನೋಡುತ್ತ ಗಡಗುಟ್ಟಿ ನಡುಗತೊಡಗುವಳು. ಕುಂತೀದೇವಿಯು ಅವಳನ್ನು ಸಾವರಿಸಿ ಹಿಡಿದುಕೊಂಡು ಕಣ್ಣೀರಿನ ಕಾಲುವೆಯನ್ನೇ ಹರಿಯಿಸುತ್ತ—]

ಕುಂತೀದೇವಿ— ನೀನೆನ್ನ ಸಂಕಟವನರಿಯಲಾರೆಯೆ ತಂಗಿ!
ವಿಧಿವಿಲಾಸದ ಮುಂದೆ ಮಾನವರ ಪಾಡೇನು?
ತಾಯಿ ಕಂದನ . . ಕೊಂದು . . ಬಾಳಿ . . ಬದುಕುವದುಂಟೆ?
ತಾಯಿ . . . ಕೊಂದವಳಲ್ಲ . . . ಪಾರ್ಥಶರಹತಿ . . . ಗವನು
ಸತ್ತ ಮಾತೂ ಸುಳ್ಳು. ವಿಧಿಯು ಕೊಂದಿತು ಅವನ.
ದೇಹವನ್ನುರುಳಿಸಿತು. ದೇಹ . . ಶಾಶ್ವತವಲ್ಲ . . .
ಕೀರ್ತಿ . . . ಅಮರವು ತಂಗಿ!
ಕರ್ಣಾವಸಾನದೊಳು . . . ಕರ್ಣನೇ . . .
. . . . ಚಿರಜೀವಿ . . . .

[ ತೆರೆಯಲ್ಲಿ ಮತ್ತೆ ಅಮರನಾದನು ಕರ್ಣ! ಕರ್ಣನಿಗೆ ಜಯವಿರಲಿ! ಎಂಬ ದನಿಯು ಹತ್ತಿರದಲ್ಲಿಯೇ ಕೇಳಿ ಬರುವದು. ಕುಂತೀದೇವಿಯು ಆ ದನಿಯನ್ನು ಆಲಿಸುತ್ತಿರುವವಂತೆಯೇ ಅಂಗಮಾತೆಯನ್ನು ತಬ್ಬಿಕೊಂಡು ದೊಪ್ಪನೇ ಬಿದ್ದು ಬಿಡುವಳು.

ವಿಷ್ಣುಭಕ್ತನು ಹೌಹಾರಿ ಓಡಿಬರುವ ಹೊತ್ತಿಗೆ ಸೈನಿಕರ ಅಮಂಗಲ ತುತ್ತೂರಿಯ ದನಿಯಾಗತೊಡಗುವದು. ಈ ಅಮಂಗಲ ರವವನ್ನು ಕೇಳಿ ಕಣ್ಣೀರಿಡುವಂತೆ.

ತೆರೆಯು ಕರ್ಣನ ಕಳೇಬರದ ಮೇಲೆ ಹೊಚ್ಚುವ ಹೊದಿಕೆಯಂತೆ. ]

—ಬಿದ್ದು ಬಿಡುವದು—

## ಶ್ರೀ ಪುರಾಣಿಕರ ಪುಸ್ತಕಗಳನ್ನು ಕುರಿತು ಕೆಲವು ಅಭಿಪ್ರಾಯಗಳು

# ರಾಮೂನ ಕತೆಗಳು

........ಹರೆಯದ ಮಬ್ಬಿನಲ್ಲಿ ಕ್ರಾಂತಿಕಾರಕ ಜಂಬಕ್ಕೆ ಬಿದ್ದು ಕೊನೆಗೆ ಸಂಪ್ರದಾಯದ ಪ್ರಬಲ ಶಕ್ತಿಗೆ ಶರಣಾಗತರಾಗಿ ತಮ್ಮನ್ನು ಹುತಾತ್ಮರಾಗಿ ಪರಿಗಣಿಸುವ ಯುವಕರು ಹಿಂದುಸ್ಥಾನದ ಈ ಹಳೆ ಹೊಸತುಗಳ ಸಂಧಿ ಕಾಲದಲ್ಲಿ ಹೇರಳವಾಗಿ ದೊರೆಯುತ್ತಾರೆ. ಅಂಥವರಿಗೆ ಇದನ್ನು ಓದುತ್ತ ಹೋದಂತೆ ತಮ್ಮ ಅಂತರಂಗಕ್ಕೇ ಯಾರೋ ಕನ್ನಡಿ ಹಿಡಿಯುತ್ತಿರುವಂತೆ ಭಾಸವಾಗದಿರದು. ಅವರು ತಮ್ಮ ಮೌಢ್ಯಕ್ಕೆ ತಾವೇ ನಗುವದು ನಿಶ್ಚಯ....

ಪುಸ್ತಕದ ಉದ್ದಕ್ಕೂ ಮಿಂಚುವ ಹಾಸ್ಯ, ಜೊಳ್ಳು ಹಾಸ್ಯ, ಅಥವಾ ಶ್ರೀರಂಗರ ಹರಟೆಗಳಲ್ಲಿ ವಿಪುಲವಾಗಿ ಕಾಣಸಿಗುವ ಶಬ್ದ ಶ್ಲೇಷಾತ್ಮಕವಾದ ನಾಳೀಕೇರಪಾಕ ಹಾಸ್ಯವಾಗಿರದೆ, ನೈಜವಾದ, ತೋರಿಕೆಗೆ ವಿಷಾದ ಮಯವೆಂದು ಕಾಣುವ ಸಂನಿವೇಶಗಳಲ್ಲಿ ಒಳಗೆ ಅವಿತಿರುವ ನಗೆಯನ್ನು ತಡವಿ ಹೊರಗೆಳೆಯಬಲ್ಲ ಸೂಕ್ಷ್ಮ ಪೃಥಕ್ಕರಣಶಕ್ತಿಯ ದ್ಯೋತಕವಾದ ಹಾಸ್ಯವಾಗಿದೆ........ಶ್ರೀ ಪುರಾಣಿಕರು ತೋರಿಸಿದ ಕಲಾಕೌಶಲ್ಯವನ್ನು ಅಭಿನಂದಿಸದಿರಲಾರೆವು.

—ಕರ್ಮವೀರ

........ಕಗ್ಗಲ್ಲನ್ನು ಕೂಡ ಕುಸುಮಿತವಾಗಿಸುವ ರೂವಾರಿಯ ಕೈಮೆ ಕವಿಯಲ್ಲುಂಟು. ಅಂತೆಯೇ ಸಾಹಿತ್ಯವೊಂದು ಶ್ರೇಷ್ಠವಾದ ಕಲೆ. "ಮರುಳಂ ಪೋ ಪುರುಳಾಗಿಪರ್" ಎಂದು ಕವಿಗಳ ಸಾಮರ್ಥ್ಯವನ್ನು ಪ್ರಶಂಸಿಸಿದ ನೇಮಿಚಂದ್ರನ ಉಕ್ತಿಗೆ ಪುಸ್ತಕದ ತುಂಬ ನಿದರ್ಶನಗಳು ಸಿಕ್ಕುತ್ತವೆ........ಸಾಹಿತಿಗೆ ಬೇಕಾದ ದರ್ಶನ ಗ್ರಂಥಕರ್ತರಲ್ಲಿದೆ. ಭಾಷೆ ನಿರ್ದುಷ್ಟವಾಗಿದ್ದು ಶೈಲಿಯು ಸರಾಗವಾಗಿದೆ. ಓದುಗರ ಉತ್ಸಾಹವನ್ನೂ, ಕುತೂಹಲವನ್ನೂ ಪುಸ್ತಕವು ಕೊನೆತನಕ ಕಾದುಕೊಳ್ಳುತ್ತದೆ........

—ಕನ್ನಡನುಡಿ

........ಕನ್ನಡದಲ್ಲಿ ಈ ರೀತಿ ಒಬ್ಬ ವ್ಯಕ್ತಿಗೆ ಸಂಬಂಧಪಟ್ಟ ಸುಂದರ ವಚನಚಿತ್ರಗಳು ವಿರಳ ಹೊಸ ಪ್ರಯೋಗ ನಡಿಸಿ ಯಶಸ್ವಿಗಳಾಗಿರುವ ಶ್ರಿ. ಪುರಾಣಿಕರು ಅಭಿನಂದನಾರ್ಹರು. ಅವರ ಸುಲಭ ಶೈಲಿಯಲ್ಲಿ ಲಾಲಿತ್ಯವಿದೆ........

—**ಕಥಾವಳಿ**

---

# ಸೈರಂಧ್ರಿ ಹಾಗೂ ಮಗನ ಗೆಲವು

........ನಾಟಕದ ರೂಪ ರೇಖೆಗಳು ಮೆಚ್ಚುವಂತಿವೆ........ಮಾನ ರಕ್ಷಣೆಗಾಗಿ ಕಾರ್ಯರಂಗಕ್ಕಿಳಿಯುವದೇ ನಿಜವಾದ ಧರ್ಮವೆಂಬ ಪ್ರಬಲ ಭಾವನೆ ಈ ನಾಟಕಕ್ಕೆ ಜೀವಕಳೆಯನ್ನು ತಂದಿದೆ........

—**ಪ್ರಬುದ್ಧ ಕರ್ನಾಟಕ**

............The delineation of various characters that flit across the pages of this play and the imaginative fervour with which the writer creates the servral scenes and the dexterity of dailogue displayed in this Rupaka merir a critical and appreciative study. The style and diction of Shri Krishnamurti are vigorous in tune with the themes that he has tried to depict.

**-The Modern Review**

............Two incidents in the Mahabharatha are taken up by Mr. Puranik to build up two powerful plays in Verses............ Mr. Puranik has fully exploited the scope to delineate a variety of emotions provided by the two themes.

**-The Hindu**

---

# ಬಾಳ ಕನಸು

........ಕೇವಲ ಕಲ್ಪನಾ ಜೀವಗಳಾಗದೆ ವಾಸ್ತವಿಕ ಪ್ರಪಂಚಕ್ಕೆ ಹೊಂದಿಕೊಂಡು ಬಾಳ ಹಸನಿಗೆ ಮಾರ್ಗದರ್ಶಕವಾಗುವಂತಹ ನಿಮ್ಮ ಕಾವ್ಯಸೇವೆ ನಾಡಿಗೊಂದು ಸಂಪತ್ತೆಂದು ಭಾವಿಸುತ್ತೇನೆ.

—ಶ್ರೀ ಉರವಕೊಂಡ ಜಗದ್ಗುರುಗಳು

........ದಾರಿದ್ರ್ಯ, ದಾಸ್ಯ, ದೈವಗೇಡಿತನಗಳ ಹೆಸರಿನಿಂದ ವ್ಯಕ್ತಿಗಳ ಮೇಲೆ ಮಾಡುವ ವ್ಯಕ್ತಿಯ ಸಮಾಜದ ಅನ್ಯಾಯಗಳನ್ನು ಈ ಕವನಗಳು ಚನ್ನಾಗಿ ಹೊರಕ್ಕೆ ಹಾಕುತ್ತವೆ........ ಶ್ರೀ. ಪುರಾಣಿಕರು ಕವಿತೆಯೆಂದ ರೇನೆಂಬದನ್ನು ಚನ್ನಾಗಿ ಅರಿತವರು. ಹೇಗೆ ಬರೆಯಬೇಕೆಂಬದನ್ನೂ ಅಭ್ಯಾಸದಿಂದ ಅರಿತುಕೊಂಡವರು. ಆದುವರಿಂದ ಛಂದೋಬಂಧ ವಿಶುದ್ಧ ವಾದುದಾಗಿದೆ. ಭಾಷೆಯಲ್ಲಿ ಶಬ್ದ-ವಾಕ್ಯಗಳು ಸಿರ್ದುಷ್ಟವಾಗಿದ್ದು, ಹೇಳ ಬೇಕೆಂಬದನ್ನು ಹೇಳಲಿಕ್ಕೆ ಸಮರ್ಥವಾಗಿವೆ.

—ಜಯಂತಿ

........ಇಲ್ಲಿಯ ಕವನಗಳಲ್ಲಿ ಕವಿಯ ಬಹುಮುಖವಾದ ಅನುಭವ, ಕಲ್ಪನಾ ಸೌಂದರ್ಯ, ಭಾವವೈವಿಧ್ಯ, ಪದಲಾಲಿತ್ಯ ಮೊದಲಾದ ಸಹಜ ಗುಣಗಳು ಸ್ವಾಭಾವಿಕವಾಗಿ ವ್ಯಕ್ತವಾಗುತ್ತವೆ.........ಸರಳವಾದ ಭಾಷೆ, ಸ್ಪಷ್ಟವಾದ ಭಾವ, ಖಚಿತವಾದ ನಿರೂಪಣೆ, ಅನುಭವ ವೇದ್ಯವಾದವಸ್ತು. ಇವು ಶ್ರೀಯುತರ ಬರವಣಿಗೆಯಲ್ಲಿ ಕಂಡುಬರುವ ಮುಖ್ಯ ವೈಶಿಷ್ಟ್ಯ.

—ಕಥಾವಳಿ

........ಪ್ರಕೃತ ಕವನಸಂಗ್ರಹದಲ್ಲಿ ಅಡಕವಾಗಿರುವ ಐತಿಹಾಸಿಕ ಸತ್ಯ, ಮರುಕ, ನಿರ್ವೇದಗಳು ಸಮಾಜದಲ್ಲಿ ಮನೆಮಾಡಿರುವ ಅನೇಕ ಅಂಧಶ್ರದ್ಧೆ ಅನ್ಯಾಯಗಳನ್ನು ತೊಲಗಿಸಿ, ಸಮಾಜದ ಆಮೋದ ಪಡೆದು, ಸತ್ಯಸಮಾಜವಾಗಿ ಮುಂದೆ ಬರಲೆಂಬುದನ್ನು ಬಿಂಬಿಸುವಂತಿದೆ.

—ಕನ್ನಡ ನುಡಿ

---

## ಮುಗಿಲ ಮಲ್ಲಿಗೆ

........ಶ್ರೀ ಕೃಷ್ಣಮೂರ್ತಿಯವರ ಈ ಕಾದಂಬರಿಯು ಬಹಳ ಶ್ಲಾಘನೀಯವಾಗಿದೆ............ಕಾದಂಬರಿಯ ಸಂಭಾಷಣೆಗಳ ರೀತಿ ಬಳಕೆಯ ಮಾತಿನದು. ಸಂಸ್ಕೃತವಾದುದು. ಬುದ್ಧಿವಂತಿಕೆಯಿಂದಲೂ ಒಳತಿರುಳುಗಳಿಂದಲೂ ಕೂಡಿದುದು. ಶ್ರೀಯುತರ ಶೈಲಿ ಸರಳ. ಇವರು ಚಿತ್ರಿಸುವದರಲ್ಲಿ ಕಲೆಯಿದೆ, ಕಾಂತಿಯಿದೆ.

—ಪ್ರಜಾಮ

........'ಮುಗಿಲ ಮಲ್ಲಿಗೆ' ಯು ಇವರ ಮೊದಲ ಕಾದಂಬರಿಯಾದರೂ ಗೆಲವುಗಂಡಿದೆ ಎಂದು ಹೇಳಬಹುದು. ನಮ್ಮ ಸಮಾಜದ ನಿಜ ಚಿತ್ರವನ್ನೂ ದಿನದ ಹೋರಾಟವನ್ನೂ ಪ್ರತಿಬಿಂಬಿಸುವ ಕತೆಯಿದು........ ಹೃದಯದ್ರಾವಕ ಸನ್ನಿವೇಶಗಳನ್ನು ಓದುತ್ತ ಹೋದಂತೆ ಕೊನೆಯನ್ನು ಅರಿತುಕೊಳ್ಳಲು ಮನಸ್ಸು ಹಾತೊರೆಯುತ್ತದೆ. ಈ ಆತುರವು ಕಥಾ ಲೇಖನಕ್ಕೆ ಗೆಲವುಗೊಡುವ ಒಂದು ಮುಖ್ಯಾಂಶ. ಲೇಖಕರು ಕಾದಂಬರಿಯ ಬರಹದಲ್ಲಿ ಸಿದ್ಧಹಸ್ತರಾಗಬಹುದೆಂಬುದಕ್ಕೆ ಸಾಕಷ್ಟು ಪ್ರಮಾಣಗಳಿವೆ.

— ಕರ್ಮವೀರ

———

## ಕೊನೆಯ ದಾರಿ

........The author has created ideal characters. He has carefully balanced action and reaction by reaching the depths of their psychology. The novel is well presented in a simple flowing style. The author has successfully portrayed ideal womanhood in Godakka. The characterisa-

tion of Gopal, Madhava, Padma, is quite consistant and their mental reactions are convincing.........

Mr. Puranik's Sairandhri and Ramoon-Kategalu have left pleasant impressions and this will take him a step further towards his bright future.

-C, K, Nagarajarao
(The Indian, P. E. N.)

........ಇಂತಹ ಒಳ್ಳೆಯ ಕಥೆಯನ್ನು ಓದುತ್ತಿದ್ದರೆ ನಮ್ಮ ಮನಸ್ಸಿಗೆ ಆಗುವ ಆನಂದ ಅವರ್ಣನೀಯ ಇಲ್ಲಿನ ಸಂಭಾಷಣೆಗಳು ತುಂಬ ಸ್ವಾರಸ್ಯವಾಗಿವೆ. ವಿಚಾರಪೂರ್ಣವಾಗಿವೆ. ಕಥೆಯನ್ನು ಸ್ವಾರಸ್ಯವಾದ ರೀತಿಯಲ್ಲಿ ಬೆಳೆಸಿಕೊಂಡು ಹೋಗಿದ್ದಾರೆ. ಇಂತಹ ಉತ್ತಮವಾದ ಕಾದಂಬರಿಯನ್ನು ನೀಡಿದ ಕೃಷ್ಣಮೂರ್ತಿ ಪುರಾಣಿಕರಿಗೂ, ಅದನ್ನು ಅಂದ ವಾದ ರೀತಿಯಲ್ಲಿ ಪ್ರಕಟಿಸಿರುವ ಉಷಾ ಸಾಹಿತ್ಯಮಾಲೆಯವರಿಗೂ ನಮ್ಮ ಅಭಿನಂದನೆಗಳಿವೆ.

— ದೇಶಬಂಧು

........ಪುಸ್ತಕದ ಉದ್ದಕ್ಕೂ ಅಲ್ಲಲ್ಲಿ ಬರುವ ಸುಂದರ ವಾಕ್ಯಗಳು ಬರೆದಿಟ್ಟುಕೊಳ್ಳುವಂತಿವೆ.

— ಕರ್ಮವೀರ

...... .ಕಾದಂಬರಿ ( ಕೊನೆಯ ದಾರಿ ) ಯ ಕಥೆ ವಿಸ್ತಾರವಾಗಿದೆ. ಸಂಭಾಷಣೆಗಳು ಸುರಸವಾಗಿವೆ. ಆದ್ದರಿಂದ ಕಥೆಯನ್ನು ಓದಲು ಕುತೂಹಲ ವಾಗುತ್ತದೆ. ಲೇಖಕರಲ್ಲಿ ಶಕ್ತಿ ಇದೆ.

— ಪುಸ್ತಕ ಪ್ರಪಂಚ

## ತೆರೆದ ಕಣ್ಣು

........ಕಾದಂಬರಿಯ ಕಥಾವಸ್ತುವನ್ನು ಹೇಳಿದ ರೀತಿ ಸೊಗಸಾಗಿದೆ. ಶೈಲಿಯಲ್ಲಿ ಓಟವಿದೆ. ಭಾಷೆ ಪರಿಶುದ್ಧವಾಗಿದೆ. ಇಲ್ಲಿ ಚಿತ್ರಿತರಾದ ಶಿಕ್ಷಕರು ನೀರಸವಾದ ಬಾಳನ್ನು ಅಪ್ಪಿಕೊಳ್ಳದೆ ಕ್ರಾಂತಿಯ ಜೀವನವನ್ನು ನಡೆಯಿಸಿದ್ದು ಮನದಟ್ಟಾಗುವಂತಿದೆ. ಕತೆಯ ಮುಗಿತಾಯದಲ್ಲಿ ಮುನ್ನೋಟದ ಸೂಚನೆಯು ರಸವತ್ತಾಗಿ ನಿಂತಿದೆ.

—ವಿಶಾಲ ಕರ್ನಾಟಕ

........ಶ್ರೀ ಪುರಾಣಿಕರ 'ಕೊನೆಯ ದಾರಿ' ಗೆ ವಿದ್ಯಾರ್ಥಿಗಳ ಜೀವನ ಹಿನ್ನೆಲೆಯಾಗಿದ್ದರೆ ಈ ( ತೆರೆದ ಕಣ್ಣು ) ಕಾದಂಬರಿಗೆ ಶಿಕ್ಷಕರ ಜೀವನವೆ ಹಿನ್ನೆಲೆಯಾಗಿದೆ.... ಕಥೆಯು ಹೆಚ್ಚು ಮನದಟ್ಟಾಗುವಂತಿದೆ. ಎಲ್ಲ ಸನ್ನಿವೇಶಗಳೂ ಶ್ರೀ ಕಾಂತ ಮಾಸ್ತರರ ಅಂತಿಮ ದುರಂತಕ್ಕೆ ಪೋಷಕವಾಗಿ ಹೆಣೆದಿವೆ. ಆದರ್ಶವನ್ನೆತ್ತಿ ತೋರುವಲ್ಲಿಯೂ ಇಲ್ಲಿ ಹೆಚ್ಚು ಸ್ಫುಟವಾದ ನಿರ್ದೇಶ ಕಾಣಿಸುತ್ತದೆ.

—ಕರ್ಮವೀರ

---

## ಮಂಜುಳಾ

........ಕಥೆಯ ಭಾಷಾಶೈಲಿ ಸುಂದರವಾಗಿ ಸರಳವಾಗಿದೆ. ಒಂದು ಬಾಳಿನ ಚಿತ್ರಣವನ್ನು ಬಹಳ ಚನ್ನಾಗಿ ಈ ಕಾದಂಬರಿಯಲ್ಲಿ ಲೇಖಕರು ಚಿತ್ರಿಸಿದ್ದಾರೆ.

—ಶ್ರೀಮತಿ ರಾಜಶ್ರೀ ಗುರುಪಾದಸ್ವಾಮಿ
( ಪ್ರಜಾಮತ )

........(ಮಂಜುಳಾ) ಕಥೆಯ ಓಟದ ಬಗ್ಗೆ ನಾವು ಲೇಖಕರನ್ನು ಅಭಿನಂದಿಸಲೇಬೇಕು. ವಿವರಣೆಗಳು ನಿರರ್ಗಳವಾಗಿ ಮುಂದೆ ಮುಂದೆ ಹೋಗುತ್ತವೆ. ಓದುಗ ಕಾದಂಬರಿಯ ಯಾವ ಭಾಗದಲ್ಲಿಯೂ ಬೇಸರ ಗೊಳ್ಳದಂತೆ ಕುತೂಹಲ ಅವನನ್ನು ಮುಷ್ಟಿಯಲ್ಲಿ ಹಿಡಿಯುತ್ತದೆ. ವಿವರಣ ಗಳು ಚಿಕ್ಕವಾದರೂ ಚೊಕ್ಕವಾಗಿವೆ.

—ಪುಸ್ತಕಪ್ರಪಂಚ

........ಶ್ರೀ ಪುರಾಣಿಕರಲ್ಲಿ ಬೇಸಾಗಿ ಬರೆಯುವ ಶಕ್ತಿ ಇದೆ. ಕಾವ್ಯ ಮಯವಾಗಿ ವರ್ಣಿಸುವ ಕಲ್ಪನಾ ರಮ್ಯತೆ ಇದೆ. ಸೂಕ್ಷ್ಮವಾದ ಮನೋ ಭಾವಗಳನ್ನು ಅವರು ಕುಶಲತೆಯಿಂದ ಚಿತ್ರಿಸಬಲ್ಲರು. ಈ (ಮಂಜುಳಾ) ಕೃತಿಯಲ್ಲಿ ತಮ್ಮ ಸಾಮರ್ಥ್ಯವನ್ನು ಅವರು ಓದುಗರ ಮನಮೆಚ್ಚುವಂತೆ ತೋರಿಸಿದ್ದಾರೆ.

— ಜಯಂತಿ

———

## ದೊರೆಸಾನಿ

........ಎಂಟು ದೃಶ್ಯಗಳಲ್ಲಿ ಚಿತ್ರಿತವಾದ ದುಃಖಾಂತವಾದ ಈ ನಾಟಕವು ಸಾಕಷ್ಟು ಪರಿಣಾಮಕಾರಿಯಾಗಿದೆಯೆಂದು ಹೇಳಬಹುದು. ಈ ನಾಟಕದಲ್ಲಿ ಬಂದಿರುವ ಕವನಗಳು ಸುಂದರವಾಗಿವೆ.

೧೯೪೪ರಲ್ಲಿ ಪ್ರಕಟವಾದ ಈ ಸರಳರಗಳೆಯ ನಾಟಕವು, ಈಗ (೨೭-೧-೧೯೫೨) ಪುನರ್ಮುದ್ರಣವಾಗುತ್ತಿರುವುದು ಅದರ ಜನಪ್ರಿಯತೆಯ ದ್ಯೋತಕವಾಗಿದೆ.

— ಕರ್ಮವೀರ

———



# ★ ಪುರಾಣಿಕರ ಪುಸ್ತಕಗಳು ★



| | | |
|---|---|---|
| ರಾಮೂನ ಕತೆಗಳು | .... .... | ಒಂದೇ ವ್ಯಕ್ತಿಗೆ ಸಂಬಂಧಿಸಿದ ಒಂಬತ್ತು ಕತೆಗಳು. |
| ಸೈರಂಧ್ರಿ ಹಾಗೂ ಮಗನ ಗೆಲವು | .... | ಸರಳರಗಳೆಯಲ್ಲಿ ಬರೆದ ನಾಟಕಗಳು. |
| ಬಾಳಕನಸು .... | .... .... | ಕವನಸಂಗ್ರಹ |
| ದೊರೆಸಾನಿ .... | .... .... | ಸರಳರಗಳೆಯಲ್ಲಿ ಬರೆದ ಕಾವ್ಯನಾಟಕ. |
| ಮುಗಿಲ ಮಲ್ಲಿಗೆ | .... .... | ಕಾದಂಬರಿ |
| ಕೊನೆಯ ದಾರಿ | .... .... | ,, |
| ತೆರೆದ ಕಣ್ಣು | .... .... | ,, |
| ಮಂಜುಳಾ .... | .... .... | ,, |
| ರಾಧೇಯ .... | .... .... | ಸರಳ ರಗಳೆಯಲ್ಲಿ ಬರೆದ ಕಾವ್ಯನಾಟಕ. |
| ಮದುವೆಯ ಆಟ | .... .... | ಮಕ್ಕಳ ಸಾಹಿತ್ಯ (ಕಥೆ–ನಾಟಕಗಳು) |

## ಅಚ್ಚಿನಲ್ಲಿ

| | | |
|---|---|---|
| ಹೊಸ ಬಾಳು | .... .... | ಕಾದಂಬರಿ |

## ಬರಲಿವೆ

| | | |
|---|---|---|
| ಜೀವನಾದ | .... .... | ಕವನಸಂಗ್ರಹ |
| ಹಬ್ಬಿದ ಬಳ್ಳಿ | .... .... | ಕಾದಂಬರಿ. |

## ಸಾಹಿತ್ಯ ಸೇವಾ ಮಂದಿರ, ಗೋಕಾಕ

